ಮಕ್ಕಳ ಮುತ್ತು—೬

# ಸ್ವಾಮಿ
# ◆ ವಿವೇಕಾನಂದರು ◆



ಲೇಖಕರು:
ಪಂಡಿತ ಶಿವಲಿ

ಪ್ರಕಾಶಕರು:
ರಾಮಾಶ್ರಯ ಬುಕ್ ಡಿಪೋ, ಧಾರವಾಡ

೧೯೫೩] [ಬೆಲೆ. ೦-೬-೦

# ಸ್ವಾಮಿ ವಿವೇಕಾನಂದರು

## ೧. ಮಗನಲ್ಲ ಮಂಗ

"ದೇವರಿಂದಲೇ ಈ ಜಗತ್ತು ಹುಟ್ಟಿದೆ. ಆತನೇ ನಮ್ಮೆಲ್ಲರನ್ನು ಕಾಪಾಡುತ್ತಾನೆ. ಆತನು ಎಲ್ಲೆಲ್ಲಿಯೂ ಇದ್ದಾನೆ. ನಾವು ಅವನನ್ನು ಭಕ್ತಿಯಿಂದ ಭಜಿಸಬೇಕು. ಇದರಿಂದ ದೇವರು ಪ್ರಸನ್ನನಾಗುತ್ತಾನೆ; ಪ್ರತ್ಯಕ್ಷನೂ ಆಗುತ್ತಾನೆ..............." ಎಂದು ಗುರುಗಳು ತಮ್ಮ ಪ್ರವಚನವನ್ನು ಸಾಗಿಸಿದ್ದರು.

"ಸ್ವಾಮೀ, ಈ ಮಾತುಗಳನ್ನು ತಾವು ಅನುಭವದಿಂದಲೇ ಹೇಳುತ್ತಿದ್ದೀರಾ? ನಿಜವಾಗಿಯೂ ದೇವರು ಇದ್ದಾನೆಯೇ? ಆತನನ್ನು ನೀವು ಎಂದಾದರೂ ನೋಡಿದ್ದೀರಾ? ನೋಡಿದ್ದರೆ ನನಗೂ ಆತನನ್ನು ತೋರಿಸುವಿರಾ?" ಪ್ರವಚನದ ನಡುವೆ ತರುಣ ತೇಜಸ್ವಿಯೊಬ್ಬ ಎದ್ದು ನಿಂತ; ಈ ಪ್ರಶ್ನೆಗಳನ್ನು ಕೇಳಿದ.

ಗುರುಗಳು ಆ ತರುಣನನ್ನು ನಿಟ್ಟಿಸಿ ಶಾಂತವಾಗಿ ದಿಟ್ಟಿಸಿ ನೋಡಿದರು. ಆ ಜಿಜ್ಞಾಸುವಿನ ಕಣ್ಣುಗಳಲ್ಲಿ ಜ್ಞಾನದ ಹಸಿವೆ ಹೊಳೆಯುತ್ತಿತ್ತು. ಎಂತಹ ಹೊಳೆಹೊಳೆವ ಕಣ್ಣುಗಳು, ಎಂತಹ ಮಿರು ಮಿರುಗುವ ಮುಖ, ಎಂತಹ ತಿದ್ದಿ ತೀಡಿ ಕಂಡರಿಸಿದಂತಹ ಮೈಕಟ್ಟು! ಮಾತಿನ ಮಾಧುರ್ಯವಂತೂ ಕಿನ್ನರಿಯನ್ನು ಬಾರಿಸಿ

ವಂತೆ! ಆ ವ್ಯಕ್ತಿತ್ವವನ್ನು ಕಂಡು ಗುರುಗಳಿಗೆ ಅತ್ಯಾನಂದವಾಯಿತು, ಅದೇ ಕ್ಷಣದಲ್ಲಿ ಆತ್ಮೀಯತೆಯೂ ಉಂಟಾಯಿತು. ಈತನೊಬ್ಬ 'ಕಾರಣಪುರುಷ' ಎಂದು ಅವರ ಅಂತರಂಗದ ಆಳದಲ್ಲಿ ಭವಿಷ್ಯದ್ವಾಣಿಯಾಯಿತು. ನೋಡನೋಡುತ್ತಿರುವಾಗಲೇ ಗುರುಗಳ ಕಣ್ಣುಗಳೊಳಗಿಂದ ಆನಂದಾಶ್ರುಗಳು ಉಕ್ಕಿದುವು. ಅದೇ ಅವಸ್ಥೆಯಲ್ಲಿಯೇ ಗುರುಮುಖದಿಂದ ಅಮೃತವಾಣಿ ಹೊರಟಿತು.

"ಮಗೂ, ನಿಜವಾಗಿಯೂ ದೇವರಿದ್ದಾನೆ. ನಾನು ಆತನನ್ನು ನೋಡಿರುವೆ. ನಿನಗೂ ಅವನನ್ನು ತೋರಿಸುವೆ. ಆದರೆ ಅವನನ್ನು ಕಾಣುವ ಕಣ್ಣು-ಮನಸ್ಸುಗಳು ತಿಳಿಯಾಗಿರಬೇಕು. ಈಗ ಆತನು ನಿನಗೇಕೆ ಕಾಣುತ್ತಿಲ್ಲ ಗೊತ್ತಿದೆಯೇ? ಪಾಂಸೆ ಮುಸುಕಿದ ತಿಳಿನೀರು, ಆ ಪಾಂಸ ಹರಿದು ಹೋಗದೆ ಹೇಗೆ ಕಂಡೀತು? ಪಾಂಸೆ ತೊರವೆಗೆದರೆ ಜಲದೇವತೆಯ ದರ್ಶನ ಆಗಿಯೇ ಆಗುವುದು. ಹೀಗೆಯೇ ಇದೆ ದೇವರ ವಾಸ್ತವ್ಯ. ಆತನು ಎಲ್ಲ ಮನುಷ್ಯರ ಹೃದಯದಲ್ಲಿಯೂ ಇದ್ದಾನೆ. ಆದರೆ ಆ ಹೃದಯದ ಮೇಲೆ ಕಾಮ-ಕ್ರೋಧ ಮೊದಲಾಗಿ ಪಾಂಸೆಯ ಆರು ತರಗಳು ಹೆಪ್ಪುಗಟ್ಟಿವೆ. ಅವುಗಳನ್ನು ತೆಗೆದೊಗೆಯಲು ಪ್ರಯತ್ನಿಸಿದರೆ ಯಾರಿಗೂ ದೇವದರ್ಶನವಾಗುವುದು. ನೀನೂ ಅದರಂತೆ ಯತ್ನಿಸು. ನಿಶ್ಚಯವಾಗಿ ನೀನು ದೇವರನ್ನು ಕಾಣುವೆ.........."

ಶಿಷ್ಯನಿಗೆ ಅದೇನೋ ಒಂದು ನವನಿಧಿಯೇ ದೊರೆತಂತಾಯಿತು! ಗುರುವಿನ ಆ ದನಿಯಲ್ಲಿ — ಆ ವಾಣಿಯಲ್ಲಿ ಅಸತ್ಯಕ್ಕೆ ಅಸ್ಪದವಿರಲಿಲ್ಲ. 'ದೇವರನ್ನು ಕಂಡಿದ್ದೇನೆ' ಎಂದು ಗಂಡೆದೆಯಿಂದ ಹೇಳುವ ಯಾವ ಗುರುಗಳೂ ಈ ಶಿಷ್ಯನಿಗೆ ಸಿಕ್ಕಿರಲಿಲ್ಲ. ಇಂದು ಅಂತಹ ಮಹಾತ್ಮನನ್ನು ನೋಡಿದಂತಾಯಿತು. ಆತನು ಅಂದಿನಿಂದಲೇ ಆ ಷಡ್ರಿಪುಗಳ ಹಾಂಸೆಯನ್ನು ಹರಿದೊಗೆಯಲು ಸಾಧನೆ

ಯನ್ನು ನಡೆಸಿದ. ಕಡೆಗೆ ಅದೇ ಗುರುವಿನ ಅನುಗ್ರಹದಿಂದ ಆತನಿಗೆ ಈಶ್ವರ ಸಾಕ್ಷಾತ್ಕಾರವೂ ಆಯಿತು. ಆಮೇಲೆ ಆತನು ಈ ಗುರುವಿನ ಧರ್ಮವನ್ನೇ ಜಗತ್ತಿನಲ್ಲಿ ಎತ್ತಿ ತೋರಿಸಿದ, ಆ ಮೂಲಕ ಹಿಂದು ಧರ್ಮಧ್ವಜವನ್ನೂ ಪರದೇಶಗಳಲ್ಲಿ ಸ್ಥಿರಗೊಳಿಸಿದ. ಆತನನ್ನು 'ವೇದಾಂತಕೇಸರಿ'ಯೆಂದು ಇಡಿಯ ಜಗತ್ತೇ ಕೊಂಡಾಡಿತು. ಆ ಗುರು ಶಿಷ್ಯರ ಜೋಡಿ ಜಗತ್ತಿನಲ್ಲಿ ಅತ್ಯಂತಾಪೂರ್ವವೆಂದು ಎಲ್ಲರೂ ಹೊಗಳಿದರು. ಈ ಗುರು ಶಿಷ್ಯರು ಯಾರು?

ಶ್ರೀ ರಾಮಕೃಷ್ಣ ಪರಮಹಂಸರೇ ಗುರುಗಳು; ಶ್ರೀ ಸ್ವಾಮಿ ವಿವೇಕಾನಂದರೇ ಅವರ ಶಿಷ್ಯರು. ರಾಜಾರಾಮಮೋಹನರಾಯರ ತರುವಾಯ, ಹಿಂದೂ ಧರ್ಮದ ವೈಶಾಲ್ಯ, ಔದಾರ್ಯ, ಸರ್ವಧರ್ಮ ಸಮನ್ವಯತೆಗಳನ್ನು ತೋರಿಸಿಕೊಟ್ಟ ಪುಣ್ಯಪುರುಷರೆಂದರೆ ಶ್ರೀ ಸ್ವಾಮಿ ವಿವೇಕಾನಂದರೇ.

'ವಿವೇಕಾನಂದ' ಎಂಬುದು ಇವರು ಸಂನ್ಯಾಸಾಶ್ರಮವನ್ನು ತೆಗೆದುಕೊಂಡ ಬಳಿಕಿನ ಹೆಸರು. ಇವರ ಪೂರ್ವಾಶ್ರಮದ ಹೆಸರು ನರೇಂದ್ರನಾಥ ದತ್ತ ಎಂದು. ಇದು ಕೂಡ ನಿಜವಾದ ಹೆಸರಲ್ಲ. ವಿಶ್ವೇಶ್ವರ ಎಂಬುದೇ ಮೂಲ ಹೆಸರು. ಈ ಹೆಸರು ಬರುವುದಕ್ಕೂ ಒಂದು ಕಾರಣವಿದೆ. ಅಂತೂ ಈ ಮಹಾಪುರುಷರ ಜೀವನವೇ ಒಂದು ತಾತ್ವಿಕ ಗೂಢವಾಗಿದೆ.

ಕಲಕತ್ತೆಯಲ್ಲಿ ದತ್ತ ಹೆಸರಿನ ಸುಪ್ರಸಿದ್ಧ ಮನೆತನ. ಅಲ್ಲಿ ವಿಶ್ವನಾಥ ದತ್ತರು ಹೆಸರಾದ ವಕೀಲರು. ಹಿಂದಿನ ನಾಲ್ಕಾರು ತಲೆಗಳಿಂದಲೂ ಈ ಮನೆತನ ಬುದ್ಧಿವಂತಿಕೆ, ಸದ್ವರ್ತನ, ಉದಾರಹೃದಯಗಳ ಬಗೆಗೆ ಸುಪ್ರಸಿದ್ಧವಾಗಿದೆ. ವಿಶ್ವನಾಥ ವಕೀಲರೂ ಹಿರಿಯರ ಹೆಸರನ್ನು ಅಚ್ಚಳಿಯದೆ ಉಳಿಸಿಕೊಂಡಿದ್ದರು; ಸ್ವಂತಶಕ್ತಿಯಿಂದ ಅದನ್ನು ಬೆಳೆಸಿಯೂ ಇದ್ದರು. ಅವರ ತಿಂಗಳ

ಗಳಿಕೆಯೇನೂ ಸಣ್ಣದಿರಲಿಲ್ಲ. ಆದರೆ ಅದೆಲ್ಲ ಬಡವರು ಬಗ್ಗರ ಹಿತಕ್ಕಾಗಿಯೇ ವೆಚ್ಚವಾಗುತ್ತಿತ್ತು. ಇವರ ಈ ಉದಾರ ಗುಣಕ್ಕೆ ತಕ್ಕಂತೆ ವಿಶಾಲಹೃದಯದ ಹೆಂಡತಿಯೇ ಸಿಕ್ಕಿದ್ದರು. ಭುವನೇಶ್ವರಿ ಎಂದು ಅವರ ಹೆಸರು.

ವಿಶ್ವನಾಥ-ಭುವನೇಶ್ವರಿಯರು ಸದಾಚಾರಿಗಳು, ಧರ್ಮಶೀಲರು, ದೇವಭಕ್ತರು. ತೃಪ್ತಿಯೇ ಅವರ ನಿಜವಾದ ಸಂಪತ್ತು. ಮನೆಗೆ ಬಂದ ಬಡವರನ್ನು ಬರಿಗೈಯಿಂದ ಎಂದೂ ಹಿಂತಿರುಗಿಸುತ್ತಿರಲಿಲ್ಲ ಅವರು. ಎಂದಮೇಲೆ, ಇಂತಹ ಪುಣ್ಯವಂತರನ್ನು ದೇವರು ಸದಾ ಸಂತೋಷದಲ್ಲಿ ಇರಿಸಿದ್ದನೆಂದು ಹೇಳಬಹುದಲ್ಲವೇ?

ಆದರೆ ನಿಜವಾದ ಸ್ಥಿತಿ ಹಾಗಿರಲಿಲ್ಲ. ಈ ಪುಣ್ಯ ಶೀಲ ದಂಪತಿಗಳಿಗೆ ಇಬ್ಬರು ಹೆಣ್ಣುಮಕ್ಕಳು ಮಾತ್ರ ಇದ್ದರು. ಗಂಡುಮಗುವೊಂದು ಬೇಕೆಂದು ಭುವನೇಶ್ವರಿದೇವಿ ಆಗಾಗ ವ್ರತ ಉಪವಾಸಗಳನ್ನು ಕೈಕೊಳ್ಳುತ್ತಿದ್ದರು. ಒಮ್ಮೆ ಇದೇ ಕಾರಣದಿಂದಲೇ ಗಂಡಹೆಂಡಿರು ಕಾಶಿಗೆ ಹೋದರು. ಭಕ್ತಿಯಿಂದ ವಿಶ್ವೇಶ್ವರನಿಗೆ ಅರ್ಚನೆ ಅಭಿಷೇಕಗಳನ್ನು ಮಾಡಿಸಿದರು; ತಮಗೆ ಗಂಡುಮಗುವಾದರೆ ದೇವರ ಹೆಸರನ್ನೇ ಇಡುವುದಾಗಿ ಬೇಡಿಕೊಂಡರು.

ಮುಂದೆ ತುಸು ದಿವಸಗಳಲ್ಲಿಯೇ—ಎಂದರೆ ೧೮೬೩ನೆಯ ಜನವರಿ ೧೨ನೆಯ ದಿನಾಂಕ ಭುವನೇಶ್ವರಿದೇವಿ ಪುತ್ರರತ್ನಕ್ಕೆ ಜನ್ಮ ಕೊಟ್ಟಳು! ಆಗ ಅವರ ಆನಂದಕ್ಕೆ ನೆಲಮುಗಿಲು ಯಾವುವೂ ಸಾಲಲಿಲ್ಲ! ಮಗುವಾದರೂ ಅಷ್ಟು ಮುದ್ದಾಗಿಯೇ ಇದ್ದಿತು! ಮುಂದೆ ತಮ್ಮ ಹರಕೆಯಂತೆ ತಾಯಿ-ತಂದೆಗಳು ಕೂಸಿಗೆ 'ವಿಶ್ವೇಶ್ವರ' ಎಂದು ಹೆಸರಿಟ್ಟರು. ಆದರೆ ಆಪ್ತೇಷ್ಟರು ಆತನನ್ನು 'ನರೇಂದ್ರ' ಎಂಬ ದೊಡ್ಡ ಹೆಸರಿನಿಂದ ಕರೆಯತೊಡಗಿದರು. ಮುಂದೆ ಅದೇ ಹೆಸರೇ ಬಳಕೆಯಲ್ಲಿ ಬಂದಿತು.

ಹುಡುಗ ತಾಯಿತಂದೆ, ಬಂಧುಬಳಗದ ಪ್ರೇಮದ ಮಡಿಲಲ್ಲಿ ಮುದ್ದಾಗಿಯೇ ಬೆಳೆದ. ಒಬ್ಬನೇ ಮಗ. ಎಂದಮೇಲೆ ಆತನ ಲಾಲನೆ ಪಾಲನೆಯನ್ನು ಕೇಳಬೇಕೇ? ನೆಲಕ್ಕೆ ಮುಟ್ಟದಂತೆ ಅಂತರದಲ್ಲಿಯೇ ಮಗುವನ್ನು ಜೋಪಾನ ಮಾಡುತ್ತಿದ್ದರು.

ಹುಡುಗ ಬೆಳೆದು ದೊಡ್ಡವನಾದ. ಅವನಿಗೆ ತುಸು ತುಸು ತಿಳಿಯಹತ್ತಿತು. ಹುಡುಗತನದ ಕಿಡಿಗೇಡಿತನಕ್ಕೆ ಆರಂಭವಾಯಿತು. ಆದರೆ ಯಾರೊಬ್ಬರೂ ಅವನನ್ನು ಹೆದರಿಸುವಂತಿರಲಿಲ್ಲ. ಅದರಿಂದ ಆ ಕಿಡಿಗೇಡಿತನ ಯಾರಿಗೂ ತಡೆಯುವುದಾಗದಷ್ಟು ಅಳತೆ ತಪ್ಪಿತು. ಆದರೂ ತಾಯಿತಂದೆಗಳು ಮತ್ತೆ ಮತ್ತೆ ಒಳ್ಳೆಯ ಮಾತಿನಿಂದಲೇ ಆತನನ್ನು ದಾರಿಗೆ ತರಲು ಯತ್ನಿಸುತ್ತಿದ್ದರು. ಅವರ ಮಾತುಗಳಿಗೆ ಮಣಿಯುವ ಮನುಷ್ಯ ಅದು ” ನರೇಂದ್ರನ ಹುಡುಗತನ ದಿನದಿನಕ್ಕೆ ಬೆಳೆದೇ ಬೆಳೆಯಿತು. ಒಮ್ಮೆ ತಾಯಿಗೆ ಕೂಡ ಅವನು ಅಸುಗೋಳ್ನಾದ. ಆಗ ಆಕೆ ಬೇಸತ್ತು - ಮಗನನ್ನು ಕೊಡು ಎಂದರೆ ಮಂಗನನ್ನು ಕೊಟ್ಟೆಯಲ್ಲ ಪರಮೇಶ್ವರಾ-ಎಂದು ನಿಟ್ಟುಸಿರು ಕರೆದರು. ಎಂದಮೇಲೆ ಅವನೆಷ್ಟು ಕಿಡಿಗೇಡಿಯಾಗಿರಬೇಡ? ಆದರೂ ಅವನನ್ನು ಯಾರೂ ಹೊಡೆಯುವಂತಿಲ್ಲ, ಹೆದರಿಸುವಂತಿಲ್ಲ. ಏಕೆಂದರೆ. ಒಬ್ಬನೇ ಒಬ್ಬ ಮಗ; ಅದು ಕೂಡ ದೇವರ ದಯೆಯಿಂದ ಹುಟ್ಟಿದವನು. ಆದುದರಿಂದ ತಾಯಿತಂದೆಗಳು ಅವನ ನಡತೆಯನ್ನು ಒಳ್ಳೆಯ ಮಾತುಗಳಿಂದಲೇ ತಿದ್ದುತ್ತಿದ್ದರು.

## ೨. ಮುಂದೆ ಮಹಾಪುರುಷ

ನರೇಂದ್ರ ತುಸು ತುಸು ದೊಡ್ಡವನಾದಂತೆ ನಡೆ-ನುಡಿಗಳಲ್ಲಿ ತಂತಾನೇ ಬದಲಾವಣೆ ತೋರತೊಡಗಿತು. ಇದಕ್ಕೆ ತಾಯಿತಂದೆಗಳ ಸುಶೀಲ ಆಚಾರ ವಿಚಾರಗಳು ಕಾರಣವಾಗಿದ್ದರೂ ಇರಬಹುದು. ಏಕೆಂದರೆ ಮಕ್ಕಳಲ್ಲಿ ಅನುಕರಣಶಕ್ತಿ ಬಲವಾಗಿರುತ್ತದೆ. ತಂದೆತಾಯಿಗಳೇ ಅವರಿಗೆ ಹತ್ತಿರದ ಮತ್ತು ಮೊದಲನೆಯ ಆಪ್ತರು. ಆದರಿಂದ ತಾಯಿತಂದೆಗಳ ನಡೆನುಡಿಗಳನ್ನೇ ಮಕ್ಕಳು ಅನುಕರಿಸುವುದು ಸ್ವಾಭಾವಿಕ ವಿಶ್ವನಾಥದತ್ತ ಮತ್ತು ಭುವನೇಶ್ವರಿಯರು ನಿಜವಾಗಿಯೂ ಪುಣ್ಯಮೂರ್ತಿಗಳು. ದಾನ ಧರ್ಮ, ಪರೋಪಕಾರಗಳಲ್ಲಿ ಯಾವಾಗಲೂ ತೊಡಗಿದವರು. ಅವರ ಅನುಕರಣವನ್ನೇ ನರೇಂದ್ರನೂ ಮಾಡಿದುದು ಸ್ವಾಭಾವಿಕವಾಗಿದೆ.

ನರೇಂದ್ರನಿಗೆ ಜಗತ್ತೆಂದರೆ ಏನೆಂದು ತಿಳಿಯದಂತಹ ವಯಸ್ಸು. ಈಗಲೀಗ ಅದನ್ನು ಕಣ್ಣುಬಿಟ್ಟು ನೋಡುತ್ತಿದ್ದ. ಆದರೆ ಅಂತಹ ಎಳೆತನದಲ್ಲಿಯೇ ಅವನ ಉದಾರ ಹೃದಯ ಹೊರಹೊಮ್ಮುತ್ತಿತ್ತು. ಬೀದಿಯಲ್ಲಿ ಹೋಗುವಾಗ ತಡವರಿಸುವ ಕುರುಡ ಭಿಕ್ಷುಕರನ್ನು ಕಂಡರೆ ನರೇಂದ್ರ ಕೂಡಲೆ ಅಲ್ಲಿ ಹೋಗುತ್ತಿದ್ದ; ಅವರನ್ನು ಕೈಹಿಡಿದು ಒಯ್ದು ಹಾದಿಗೆ ಹಚ್ಚುತ್ತಿದ್ದ. ಮನೆಯ ಮುಂದೆ ದೀನದರಿದ್ರರು ಬಿಕ್ಕೆ ಬೇಡಿದರೆ ತಾನು ತಿನ್ನುಣ್ಣುವುದನ್ನು ಅವರಿಗೆ ಕೊಟ್ಟುಬಿಡುತ್ತಿದ್ದ. ಈ ಪರೋಪಕಾರ ಗುಣವೆಲ್ಲ ತಾಯಿತಂದೆಗಳ ಅನುಕರಣೆಯೇ ಇರಬೇಕು; ಅಥವಾ ಹುಟ್ಟುಗುಣವೇ ಆಗಿದ್ದರೂ ಆಗಿರಬಹುದು.

ಒಮ್ಮೆಯಂತೂ ಈ ಔದಾರ್ಯ ಶಿಖರಕ್ಕೆ ಮುಟ್ಟಿತು. ನರೇಂದ್ರ ಮೈಮೇಲೆ ಬೆಲೆಯುಳ್ಳ ಬಟ್ಟೆಯನ್ನು ಮೈಮೇಲೆ ಹಾಕಿ

ಕೊಂಡು ಬಾಗಿಲಲ್ಲಿ ನಿಂತಿದ್ದ. ಆಗ ಭಿಕ್ಷುಕನೊಬ್ಬ ಬಂದ, ಹುಡುಗ ಆತನಿಗೆ ನಗುನಗುತ್ತ ಭಿಕ್ಷೆಯನ್ನು ನೀಡಿದ, ಮತ್ತೇನು ಬೇಕು? ಎಂದು ಕೇಳಿದ. ಭಿಕ್ಷುಕ–ಚೇಷ್ಟಗಾಗಿಯೇ ಏನೋ !–ನಿನ್ನ ಮೈಮೇಲಿನ ಬಟ್ಟೆಯನ್ನು ಕೊಡು ಎಂದ. ನರೇಂದ್ರ ಬಟ್ಟೆಯ ಬೆಲೆಯ ಬಗೆಗೆ ವಿಚಾರವನ್ನು ತೆಗೆದುಕೊಳ್ಳಲೇ ಇಲ್ಲ. ಬಡವರಿಗ ಹಿತವಾದರೆ ಸಾಕು, ಎಂದು ಬಟ್ಟೆಯನ್ನು ತೆಗೆದು ಎಸೆದುಬಿಟ್ಟ ! ಅವನ್ನು ತೆಗೆದುಕೊಳ್ಳಬೇಕೋ ಬೇಡವೋ ಎಂದು ತಿರುಕನಿಗೆ ಸಂದೇಹ. ಆಗ ವಿಶ್ವನಾಥರು ಹೊರಗೆ ಬಂದರು; ಮಗನನ್ನು ಅಪ್ಪಿಕೊಂಡರು. ಮತ್ತು ತಿರುಕನಿಗೆ ಬಟ್ಟೆಯನ್ನು ತೆಗೆದುಕೊಂಡು ಹೋಗು, ಅವರೆ ಅವರ ಸದುಪಯೋಗ ಮಾಡಿಕೋ -ಎಂದು ಹೇಳಿದರು.

ನರೇಂದ್ರ ಒಳಗೆ ಬಂದ. ತಾಯಿ ಹೇಳಿದರು ನರೇಂದ್ರಾ, ತಿರುಕ ಕೇಳಿದ ಕೂಡಲೆ ಬೆಲೆಯುಳ್ಳ ಬಟ್ಟೆಯನ್ನು ಅವನಿಗೆ ಕೊಟ್ಟು ಬಿಟ್ಟೆಯಲ್ಲ; ಅವರಿಂದ ಅವನಿಗೇನುಪಯೋಗ? ಈಗ ಅವನು ಅವನ್ನು ಮಾರಿದರೆ ಹತ್ತು ಹದಿನೈದು ರೂಪಾಯಿ ಬರುವುವು. ಅವು ಗಳನ್ನೇ ತಕ್ಕೊಂಡು ಅವನು ಜೂಜಾಡಬಹುದು; ಇಲ್ಲವೆ ಸೆರೆ ಕುಡಿಯಬಹುದು. ಎಂದಮೇಲೆ ಅವನ ಕೆಟ್ಟ ನಡತೆಗೆ ನಿನ್ನ ಉದಾರ ದಾನವೇ ಕಾರಣವಾಗಲಿಲ್ಲವೇ? ಎಂದಮೇಲೆ ತಪ್ಪುಗಾರ ನೀನೇ ಆದಂತಾಯಿತು. ಈಗಾದುದು ಆಗಿಹೋಯಿತು. ಇನ್ನು ಮೇಲಾದರೂ ಬೇಡುವವನ ಅವಶ್ಯಕತೆಯನ್ನು ತಿಳಿದುಕೊಂಡು ದಾನ ಮಾಡು !

ಮಾತೃದೇವತೆಯ ಈ ಮಾತುಗಳು ಆ ಎಳೆ ವಯಸ್ಸಿನಲ್ಲಿ ಆತನಿಗೆ ತಿಳಿದುವೋ ಇಲ್ಲವೋ. ಏಕೆಂದರೆ ಆತನ ದಾನವ ಕೈ

ಎಂದಿನಂತೆ ಸಾಗಿಯೇ ಇತ್ತು. ತಂದೆತಾಯಿಗಳು ಈ ಉದಾರ ಗುಣಕ್ಕಾಗಿ ಅವನನ್ನು ಕೌತುಕದಿಂದ ಕಾಣುತ್ತಿದ್ದರು.

ನರೇಂದ್ರನಿಗೆ ಚಿಕ್ಕ ವಯಸ್ಸಿನಲ್ಲಿ ಆಟಪಾಟಗಳೆಂದರೆ ಅಚ್ಚು ಮೆಚ್ಚು. ಯಾವ ಗಂಡಾಂತರಕ್ಕೂ ಹೆದರದೆ ಗೆಳೆಯರೊಡನೆ ಆಡು ತ್ತಿದ್ದ. ಓಡುವುದರಲ್ಲಂತೂ ಇವನನ್ನು ಸರಿಗಟ್ಟುವವರೇ ಇರಲಿಲ್ಲ. ಹೀಗಾಗಿ ಆತನ ಮೈಕಟ್ಟು ತಿದ್ದಿ-ತೀಡಿ ಮಾಡಿದಂತಿತ್ತು, ಅಚ್ಚು ಕಟ್ಟಿನದಾಗಿತ್ತು.

ಈ ಆಟಗಳಲ್ಲಿ ಇನ್ನೊಂದು ಮಾತನ್ನು ನಾವು ಅವಶ್ಯವಾಗಿ ನೆನಪಿಡಬೇಕು. ನಮ್ಮ ಸಣ್ಣ ಮಕ್ಕಳು ಗೊಂಬೆಯ ಮದುವೆ, ರಾಜಾರಾಣಿಯರ ಆಟ ಮೊದಲಾದುವನ್ನು ಆಡುವುದಿಲ್ಲವೇ? ಹಾಗೆಯೇ ನರೇಂದ್ರ ತನ್ನ ಗೆಳೆಯರೊಡನೆ ಧರ್ಮಗುರುವಿನ ಆಟವನ್ನು ಆಡುತ್ತಿದ್ದ. ತಾನೊಂದು ಕಪನಿಯನ್ನು ಹಾಕಿಕೊಂಡು ಮೈಗೆಲ್ಲ ವಿಭೂತಿಯನ್ನು ಹಚ್ಚಿಕೊಳ್ಳುತ್ತಿದ್ದ; ಕೊರಳಲ್ಲಿ ರುದ್ರಾಕ್ಷಿಮಾಲೆ ಯನ್ನು ಹಾಕಿಕೊಳ್ಳುತ್ತಿದ್ದ; ಧರ್ಮಗುರುವಾಗಿ ಕುಳ್ಳಿರುತ್ತಿದ್ದ. ಉಳಿದ ಹುಡುಗರು ಶಿಷ್ಯರಾಗಿ ಇದಿರಿಗೆ ಸೇರುತ್ತಿದ್ದರು. ಆಮೇಲೆ ನರೇಂದ್ರ ಆ ಶಿಷ್ಯರಿಗೆ ದೇವರ ಬಗೆಗೆ ಏನೇನೋ ಹೇಳುತ್ತಿದ್ದ. 'ಬೆಳೆಯ ಸಿರಿ ಮೊಳಕೆಯಲ್ಲಿ' ಎನ್ನುವಂತೆ ಮುಂದೆ ಕೈಕೊಳ್ಳುವ ಸಂನ್ಯಾಸಜೀವನದ—ಧರ್ಮಬೋಧಕನ-ಛಾಯೆ ಈ ಎಳೆ ಜೀವನ ದಲ್ಲಿಯೇ ಒಡೆದು ಕಾಣುತ್ತಿತ್ತು.

ನರೇಂದ್ರನನ್ನು "ಮಗನಲ್ಲ, ಮಂಗ" ಎಂದು ಹೇಳಿದ ತಾಯಿ ತಂದೆಗಳು ಈಗ ಮಗನ ಆಟಪಾಟಗಳನ್ನು ನೋಡಿನೋಡಿ ನಲಿದಾ ಡುತ್ತಿದ್ದರು. ಈಗ ಆತನಲ್ಲಿ ಕಿಡಿಗೇಡಿತನವಿಲ್ಲ, ಹಟಮಾರಿತನ ವಿಲ್ಲ. ಅವನ ಪ್ರೇಮಲ ಸ್ವಭಾವ, ಒಳಿತಾದ ನಡೆನುಡಿ, ಮಾತು ಕತೆಗಳಲ್ಲಿಯ ಜಾಣತನಗಳು ವಿಶ್ವನಾಥ ದತ್ತರಲ್ಲಿ ಮಗನ ಬಗೆಗೆ

ಹೊಸ ಆಸೆ ಆಕಾಂಕ್ಷೆಗಳನ್ನು ಹುಟ್ಟಿಸಿದುವು. ಮುಂದೊಂದು ಕಾಲದಲ್ಲಿ ಈತನು ಮಹಾಪುರುಷನೇ ಆಗುವನೆಂದು ಅವರು ಸವಿಗನಸುಗಳನ್ನು ಕಾಣುತ್ತಿದ್ದರು. ಅದರಿಂದ ಮಗನ ಭವಿಷ್ಯತ್ತನ್ನು ರೂಪಿಸುವ ಬಗೆಗೆ ಒಳ್ಳೆ ದಕ್ಷತೆಯನ್ನು ವಹಿಸಿದರು.

## ೨. ಭಕ್ತಿಯ ವಿಚಾರೋಪಣ

ನರೇಂದ್ರನಿಗೆ ಐದು ವರ್ಷ ಮುಗಿದುವು. ಇನ್ನು ಆತನನ್ನು ಶಾಲೆಗೆ ಕಳಿಸಬೇಕು. ಆದರೆ ಶಾಲೆಯಲ್ಲಿ ಕಿಡಿಗೇಡಿ ಹುಡುಗರು ಬಹಳ. ಅವರ ಜೊತೆಗೆ ಬಿದ್ದರೆ ಮಗ ಕೆಟ್ಟುಹೋದಾನೆಂದು ವಿಶ್ವನಾಥ ದತ್ತರಿಗೆ ಚಿಂತೆ. ಏಕೆಂದರೆ, ವಿದ್ಯಾರ್ಥಿಗಳಿಗೆ ಓದು-ಬರಹಗಳ ಜ್ಞಾನಕ್ಕಿಂತ ಸುಶೀಲ ಅತ್ಯವಶ್ಯ. ಅದಕ್ಕಾಗಿ, ಮಗನ ಶಿಕ್ಷಣಕ್ಕೆ ಮನೆಯಲ್ಲಿಯೇ ಒಬ್ಬ ಗುರುವನ್ನು ನಿಯಮಿಸಿದರು.

ನರೇಂದ್ರನ ಬುದ್ಧಿ ಬಲು ಚುರುಕು; ಬಲು ಹರಿತ. ಒಮ್ಮೆ ಗುರುಗಳು ಹೇಳಿದುದನ್ನು ಅವನು ಎಂದೂ ಮರೆಯುತ್ತಿರಲಿಲ್ಲ. ಪಾಠವನ್ನು ಒಮ್ಮೆ ಓದಿದರೆ ಸಾಕು; ಅದು ಅಕ್ಷರಕ್ಕೆ ಅಕ್ಷರ ಆತನ ನೆನಪಿನಲ್ಲಿ ಉಳಿಯುತ್ತಿತ್ತು. ಯಾವ ವಿಷಯವನ್ನು ಆತನು ಆಟವಾಡುತ್ತಲೇ ಕಲಿಯುತ್ತಿದ್ದ. ಹೀಗೆಯೇ, ಎರಡೇ ವರುಷಗಳಲ್ಲಿ ಆತನ ಪ್ರಾಥಮಿಕ ಶಿಕ್ಷಣ ಮುಗಿಯಿತು.

ಏಳನೆಯ ವಯಸ್ಸಿಗೆ ನರೇಂದ್ರ ಇಂಗ್ರೇಜಿ ಶಾಲೆಯನ್ನು ಪ್ರವೇಶಿಸಿದ. ಅಲ್ಲಿಯೂ ಆತನ ಬುದ್ಧಿಯ ಬೆಳಕು ಬೆಳೆಯುತ್ತಲೇ ನಡೆಯಿತು. ಯಾವ ಇಯತ್ತೆಯಲ್ಲಿಯೂ ಮೊದಲಿಗನಾಗಿಯೇ

ಪಾಸಾಗುತ್ತಿದ್ದ. ಈ ಬುದ್ಧಿಯ ಬಲಕ್ಕೆ ತಕ್ಕಂತೆ ಆತನ ನಡತೆಯೂ ಬಲು ಒಳ್ಳೆಯದಾಗಿತ್ತು. ತನ್ನ ಒಡನಾಡಿಗಳೊಡನೆ ಯಾವಾಗಲೂ ಸ್ನೇಹ-ಸಲುಗೆಗಳಿಂದ ನಡೆಕೊಳ್ಳುತ್ತಿದ್ದ. ಗುರುಗಳಿಗೆ ಅತ್ಯಂತ ವಿಧೇಯನಾಗಿರುತ್ತಿದ್ದ. ಇದರಿಂದ. ಆ ಶಾಲೆಯ ಗುರುಗಳೂ ಗೆಳೆಯರೂ ನರೇಂದ್ರನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಹೀಗೆಯೇ ಹೆಚ್ಚು ಹೆಚ್ಚು ಬೆಳವಣಿಗೆಯನ್ನು ಪಡೆಯುತ್ತ, ತನ್ನ ಹದಿನೈದನೆಯ ವಯಸ್ಸಿಗೇ ನರೇಂದ್ರ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಪಾಸಾದ. ಮುಂದಿನ ಅಭ್ಯಾಸಕ್ಕಾಗಿ ಕಾಲೇಜನ್ನು ಸೇರಿದ.

ನರೇಂದ್ರನಲ್ಲಿ ಎಳೆತನದಿಂದಲೂ ಈಶ್ವರಭಕ್ತಿ ಇದ್ದೇ ಇದ್ದಿತು. ಆಗ ಅದು ಕುರುಡ ನಂಬಿಗೆಯಾಗಿತ್ತು. ಈಗ ಆ ಬಗೆಗೆ ಚಿಕಿತ್ಸಕ ಬುದ್ಧಿ ಹುಟ್ಟಿತು. ದೇವರು ಇದ್ದಾನೆಯೇ? ಇದ್ದರೆ ಎಲ್ಲಿದ್ದಾನೆ, ಹೇಗಿದ್ದಾನೆ? ಆತನನ್ನು ಯಾರಾದರೂ ಕಂಡಿದ್ದಾರೆಯೇ? ಅಂತಹರು ಎಲ್ಲಿದ್ದಾರೆ? ಅವರು ತನಗೂ ದೇವರನ್ನು ತೋರಿಸಬಲ್ಲರೇ? ಇವೇ ಮುಂತಾದ ಪ್ರಶ್ನಗಳು ಆತನಲ್ಲಿ ಎಡೆಬಿಡದೆ ಏಳುತ್ತಿದ್ದುವು.

ಈ ಪ್ರಶ್ನಗಳ ಸಮಾಧಾನಕ್ಕಾಗಿ ಬೇರೆ ಬೇರೆ ಧರ್ಮಗ್ರಂಥಗಳನ್ನು ಓದತೊಡಗಿದ; ಹೆಸರಾಂತ ಸಾಧುಸಂತರನ್ನು ಕಾಣುತ್ತಿದ್ದ; ಈ ಬಗೆಗೆ ವಿದ್ವಾಂಸರೊಡನೆ ವಿಚಾರವಿನಿಮಯವನ್ನು ನಡೆಸಿದ. ಹೀಗೆಯೇ ಆತನ ಈಶ್ವರ ಭಕ್ತಿಯ ಹಸಿವು ಹಂಬಲುಗಳು ಹವಣುಮೀರಿ ಬೆಳೆದುವು. ಆ ಕಾಲಕ್ಕೆ ಸತ್ಯಸಮಾಜ, ಆರ್ಯಸಮಾಜ, ಬ್ರಹ್ಮೋಸಮಾಜ ಮೊದಲಾಗಿ ಈಶ್ವರಭಕ್ತಿ ಸಂಸ್ಥೆಗಳು ಹುಟ್ಟಿದ್ದುವು. ಅವುಗಳಲ್ಲಿ ಬ್ರಹ್ಮೋಸಮಾಜದ ತತ್ತ್ವಗಳು ಈತನ ಮನಸ್ಸನ್ನು ಸೆಳೆದುವು. 'ಮಾನವರೆಲ್ಲರೂ ಸಮಾನರು. ಎಲ್ಲರಿಗೂ ದೇವರೊಬ್ಬನೇ ತಂದೆ. ಆದರಿಂದ ಮಾನವರೆಲ್ಲ ಒಬ್ಬರೊಬ್ಬರ ಬಂಧುಗಳು' ಎಂಬುದೇ ಆ ತತ್ವಗಳ ತಿರುಳು. ಮತ್ತು ಆ ಸಮಾ

ಜದ ಪ್ರಾರ್ಥನಾ ಪದ್ಧತಿಯೂ ಒಳ್ಳೆ ಆಕರ್ಷಕವಾಗಿತ್ತು. ಅದರಿಂದ ನರೇಂದ್ರ ಆ ಎಳೆ ವಯಸ್ಸಿನಲ್ಲಿಯೇ ಬ್ರಹ್ಮಸಮಾಜವನ್ನು ಸೇರಿದ

ಬ್ರಹ್ಮೋಸಮಾಜದಲ್ಲಿ ಪ್ರಾರ್ಥನಾ ಪದಗಳನ್ನು ಒಳ್ಳೆ ಚೆಂದ ವಾಗಿ ಹಾಡುವ ಪದ್ಧತಿಯಿತ್ತು. ನರೇಂದ್ರನಿಗೆ ಹಿರಿಯರ ಕಾಲ ದಿಂದಲೂ ಸಂಗೀತ ಸಂಸ್ಕಾರವಾಗಿತ್ತು. ಆತನ ಕಂಠವೂ ಬಹು ಮಧುರ, ಮೋಹಕ. ಅದರಿಂದ ತಂದೆಯವರು ಆತನಿಗೆ ಒಳ್ಳೆ ಗುರುಗಳಿಂದ ಸಂಗೀತವನ್ನು ಹೇಳಿಸಿದ್ದರು. ಇವೆಲ್ಲವುಗಳ ಫಲ ವಾಗಿ ನರೇಂದ್ರ ಸಮಾಜದ ಪದ್ಯಗಳನ್ನು ಒಳ್ಳೆ ಇಂಪಾಗಿ ಹಾಡು ತ್ತಿದ್ದ. ಆತನ ಹಾಡನ್ನು ಕೇಳುವುದಕ್ಕಾಗಿಯೇ ಎಷ್ಟೋ ಜನ ಹೊರಗಿನವರೂ ಸಮಾಜದ ಪ್ರಾರ್ಥನೆಗೆ ಬರುತ್ತಿದ್ದರು.

ಮಗನ ಈ ಭಕ್ತಿಭಾವದಿಂದ ವಿಶ್ವನಾಥ ದತ್ತರಿಗೆ ಬಹಳ ಸಂತೋಷವಾಯಿತು. ಏಕೆಂದರೆ, ಮಕ್ಕಳು ಒಳ್ಳೆಯ ನಡತೆಯಲ್ಲಿ ದ್ದುದು ತಾಯಿ ತಂದೆಗಳಿಗೆ ಭೂಷಣವಲ್ಲವೇ? ಆದರೆ, ಇದೇ ಭಕ್ತಿಯ ಹುಚ್ಚಿನಿಂದ ಮಗ ಸಂನ್ಯಾಸಿಯಾದರೆ ಮುಂದೆ ವಂಶದ ಗತಿಯೇನು? ಎಂದು ತಂದೆಗೆ ಚಿಂತೆಯೂ ಆರಂಭವಾಯಿತು. ಆದುದರಿಂದ, ತೀವ್ರವೇ ಮಗನ ಮದುವೆಯನ್ನು ಮುಗಿಸಿ ಬಿಡ ಬೇಕು ಎಂದು ವಿಚಾರಿಸಿದರು; ಇದನ್ನು ತಮ್ಮೊಬ್ಬ ಆಪ್ತರ ಮುಖಾಂತರ ನರೇಂದ್ರನಿಗೆ ತಿಳಿಸಿದರು. ಆಗ ಅವನು ಮಡದಿ ಮಕ್ಕಳ ಸಣ್ಣದೊಂದು ಸಂಸಾರದ ಸೂತ್ರಧಾರನಾಗುವ ಇಚ್ಛೆ ನನ ಗಿಲ್ಲ. ವಿಶ್ವಸಂಸಾರದ ಸೂತ್ರಧಾರನಾಗಬೇಕೆಂದು ನನ್ನ ಹೆಬ್ಬಯಕೆ ಯಿದೆ. ಅದರಿಂದ ನನ್ನ ಮದುವೆಯ ಮಾತನ್ನು ಮರೆತು ಬಿಡಿರಿ.. ಎಂದು ಸ್ಪಷ್ಟವಾಗಿ ಹೇಳಿಬಿಟ್ಟ. ಇದ್ದೊಬ್ಬ ಮಗ ಈ ರೀತಿ ಹೇಳಿ ದಾಗ ತಾಯ್ತಂದೆಗಳಿಗೆ ಹೇಗೆನಿಸಿರಬೇಕು?

ನರೇಂದ್ರನಿಗೆ ಅಧ್ಯಾತ್ಮದ ಹಂಬಲು ದಿನದಿನಕ್ಕೆ ಹಿರಿದಾಯಿತು. ಆ ಬಗೆಗೆ ಅನೇಕ ಗ್ರಂಥಗಳನ್ನು ಓದಿದ. ಭಗವದ್ಗೀತೆಯಂತೂ ಆತನ ಪ್ರತಿಕ್ಷಣದ ಪಾರಾಯಣದ ಪುಸ್ತಕವಾಯಿತು. ಅದೇ ಆತನ ನಿತ್ಯಾಚರಣೆಗೆ ಮಾರ್ಗದರ್ಶಕವೂ ಆಯಿತು. ಈಗ ಆತನಿಗೆ ಈಶ್ವರನನ್ನು ಪ್ರತ್ಯಕ್ಷವಾಗಿ ತೋರಿಸಬಲ್ಲ ಗುರುಗಳು ಬೇಕಾಗಿದ್ದರು. ಯಾರು ಕೂಡಿದರೂ ಅವರ ಇದಿರಿಗೆ ಆತನು ಅದೇ ವಿಷಯವನ್ನೇ ಕೇಳುತ್ತಿದ್ದ.

ಡಾಕ್ಟರ ರಾಮಚಂದ್ರ ದತ್ತರು ನರೇಂದ್ರನ ಸಮೀಪದ ಆಪ್ತರು. ಅವರು ನರೇಂದ್ರನನ್ನು ದಕ್ಷಿಣೇಶ್ವರಕ್ಕೆ ಕರೆದೊಯ್ದರು. ಅಲ್ಲಿ ಅವರ ಗುರುಗಳಾದ ಶ್ರೀ ರಾಮಕೃಷ್ಣ ಪರಮಹಂಸರು ಇರುತ್ತಿದ್ದರು. ಈ ಗುರುಗಳು ಯಾವ ಶಾಲೆ ಕಾಲೇಜುಗಳಲ್ಲಿಯೂ ಓದಿದವರಲ್ಲ. ದೇವರ ಕೃಪೆಯಿಂದಲೇ ಅವರಿಗೆ ಅಧ್ಯಾತ್ಮದ ಜ್ಞಾನವಾಗಿತ್ತು. ಅವರ ಮಾತಿನಲ್ಲಿ ಸರಸ್ವತೀ ದೇವಿಯೂ—ಬೃಹಸ್ಪತಿಗಳೂ ನೆಲೆನಿಂತಂತೆ ತೋರುತ್ತಿತ್ತು. ಯಾವ ಸಣ್ಣ ದೊಡ್ಡ ವಿಷಯವನ್ನೂ ಅತಿ ಸರಳ ಭಾಷೆಯಲ್ಲಿ ಭಕ್ತರಿಗೆ ಮನಮುಟ್ಟುವಂತೆ ಹೇಳುತ್ತಿದ್ದರು. ನರೇಂದ್ರ ಅವರ ಉಪದೇಶಾಮೃತವನ್ನು ಕೇಳುತ್ತ ಕೇಳುತ್ತ ಮೈಮರೆತ. ಈ ಗುರುವೇ ತನ್ನ ಜನ್ಮದ ಉದ್ಧಾರಕನೆಂದು ನಿರ್ಧಾರಮಾಡಿಕೊಂಡ. ಅಂದು ಗುರುವಿಗೆ ಏನನ್ನೂ ಕೇಳಲಿಲ್ಲ; ಹಾಗೆಯೇ ನಮಸ್ಕಾರ ಮಾಡಿ ತಿರುಗಿದ. ಮುಂದೆ ಬಿಡುವಿನ ದಿವಸಗಳಲ್ಲಿ ಅಲ್ಲಿಗೆ ತಪ್ಪದೇ ಹೋಗುತ್ತಿದ್ದ.

---

## ೪. ಹೊಟ್ಟೆಯ ಹೋರಾಟ

೧೮೮೪ರಲ್ಲಿ ನರೇಂದ್ರ ಬಿ. ಎ. ಪರೀಕ್ಷೆಗೆ ಕುಳಿತ. ಆತನು ಪ್ರಥಮ ತರಗತಿಯಲಿ ಪಾಸಾಗುವನೆಂದು ಎಲ್ಲರೂ ಆನಂದದಿಂದ ಇದ್ದರು. ಮುಂದೆ ಮಗನನ್ನು ವಕೀಲಿ ಪರೀಕ್ಷೆಗೆ ಕಳಿಸಬೇಕೆಂದು ವಿಶ್ವನಾಥ ದತ್ತರು ಕನಸಿನ ಮನೆಗಳನ್ನು ಕಟ್ಟುತ್ತಿದ್ದರು. ಆದರೆ ವಿಧಿಯ ಲೀಲೆಯೇ ಬೇರೆಯಾಗಿತ್ತು. ಬಿ. ಎ. ಪರಿಣಾಮ ತಿಳಿಯುವ ಮುನ್ನವೇ ವಿಶ್ವನಾಥ ದತ್ತರು ಪರಲೋಕವಾಸಿಗಳಾದರು! ಎಲ್ಲರ ಕನಸಿನ ಕಟ್ಟಡಗಳೆಲ್ಲ ಕುಸಿದುಬಿದ್ದುವು.

ವಿಶ್ವನಾಥ ದತ್ತರು ದೊಡ್ಡ ವಕೀಲರು. ಅವರಿಗೆ ತಿಂಗಳ ಉತ್ಪನ್ನವು ಚೆನ್ನಾಗಿಯೇ ಇದ್ದಿತು. ಆದರೆ ಬಂದುದೆಲ್ಲ ಬಡಬಗ್ಗರಿಗೇ ಹೋಗುತ್ತಿತ್ತು. ಅಂತಹ ಕೊಡುಗೈದೊರೆ ಅವರು. ತಮಗಾಗಿ ಅವರು ಏನನ್ನೂ ಸಂಗ್ರಹಿಸಿ ಇಟ್ಟಿರಲಿಲ್ಲ. ಅದರಿಂದ ಮುಂದೆ ಮನೆತನದ ಜೀವನವೇ ಸಾಗದಂತಾಯಿತು. ಮನೆಯಲ್ಲಾದರೋ ನಾಲ್ಕಾರು ಜನರು. ಅವರೆಲ್ಲರ ಹೊಟ್ಟೆಬಟ್ಟೆಗಳ ಹೊಣೆಗಾರಿಕೆ ಈಗ ನರೇಂದ್ರನ ಮೇಲೆಯೇ ಬಿದ್ದಿತು. ಆದುದರಿಂದ ಆತನು ಕಲಿಯುವ ಆಶೆಯನ್ನೂ ಬಿಟ್ಟ, ಆಧ್ಯಾತ್ಮದ ಆಸೆಯನ್ನೂ ಬಿಟ್ಟ; ಹೊಟ್ಟೆಯ ಹೋರಾಟದ ಕುರುಕ್ಷೇತ್ರದಲ್ಲಿ ಕಾಲಿಟ್ಟ! ಮೊದಲ ಹೆಜ್ಜೆಗೇ ಆತನಿಗೆ ಪೆಟ್ಟಿನ ಮೇಲೆ ಪೆಟ್ಟು ಬೀಳತೊಡಗಿದುವು.

ನರೇಂದ್ರ ಅಲ್ಲಲ್ಲಿ ನೌಕರಿಗಾಗಿ ಅಲೆದಾಡುತ್ತಿದ್ದ. ಯಾರು ಯಾರನ್ನೋ ಕಾಣುತ್ತಿದ್ದ. ಅವರ ಮರುತ್ತರಗಳಿಗೆ ಮೋರೆ ಒಣಗಿಸಿಕೊಂಡು ಮತ್ತೆ ಮುಂದೆ ನಡೆಯುತ್ತಿದ್ದ. ಎಲ್ಲೆಲ್ಲಿ ಪ್ರಯತ್ನ ಮಾಡಿದರೂ ನೌಕರಿ ಸಿಕ್ಕಲೊಲ್ಲದು. ನೌಕರಿಯಿಲ್ಲದೇ ಕಾಸು ಸಿಕ್ಕುವದು ಹೇಗೆ ಸಂಜೆಗೆ ಬರಿಗೈಯಿಂದ, ಒಣಗಿದ ಮೋರೆಯಿಂದ

ಮನೆಗೆ ಬರುತ್ತಿದ್ದ. ಮನೆಯಲ್ಲಾದರೋ ಹಸಿವಿನ ಹಾಹಾಕಾರ! ಅನ್ನ! ಅನ್ನ! ಅನ್ನ! ಆ ಎಳೆಮಕ್ಕಳ ಅಳುವನ್ನು ಕೇಳಿ ನರೇಂದ್ರನ ಕರುಳು ಕೊರೆಯುತ್ತಿದ್ದವು. ಅವನೂ ಕಣ್ಣೀರಾಡಿಸುತ್ತ ಸುಮ್ಮನೆ ನಿಂತು ಬಿಡುತ್ತಿದ್ದ. ಮಕ್ಕಳ ಗೋಳನ್ನು ತಾಳಲಾರದೆ ಭುವನೇಶ್ವರಿ ದೇವಿಯೂ ನರೇಂದ್ರನಿಗೆ ಮನಬಲ್ಲಂತೆ ಆಡಿಬಿಡುತ್ತಿದ್ದಳು. ಅಂದಿನ ಆತನ ಬಾಳು ದೇವರಿಗೆ ಪ್ರೀತಿಯಾಗಬೇಕು. ಕಾಳ್ಗಿಚ್ಚಿನ ಮಧ್ಯದಲ್ಲಿ ಸಿಕ್ಕ ಹರಿಣದಂತೆ ಆಗಿತ್ತು ಆತನ ಸ್ಥಿತಿ? ಎತ್ತ ನೋಡಿದತ್ತ ಉರಿಯೇ ಉರಿ! ದಿನಬೆಳಗಾದರೆ ಈ ಸ್ಥಿತಿ ತಪ್ಪಿದುದಲ್ಲ. ಆಗಿನ ತನ್ನ ದುರಂತವನ್ನು ನರೇಂದ್ರನೇ ಒಂದೆಡೆಯಲ್ಲಿ ಹೇಳಿದ್ದಾನೆ. —ಬೆಳಗಿಗೆ ಎದ್ದು ನೌಕರಿ ಹುಡುಕುವದಕ್ಕೆ ಹೊರಡುತ್ತಿದ್ದೆ. ಆ ಮೊದಲು ಮನೆಯಲ್ಲಿ ಏನೇನಿದೆಯೆಂಬುದನ್ನು ನೋಡಬೇಕಾಗುತ್ತಿತ್ತು. ಸಂಗ್ರಹ ಎಲ್ಲರಿಗೂ ಸಾಲುವಷ್ಟಿಲ್ಲವಾದರೆ 'ನನಗೆ ಊಟಕ್ಕೆ ಬೇರೆ ಕಡೆಗೆ ಔತಣವಿದೆ' ಎಂದು ಸುಳ್ಳೆ ಹೇಳಿ ಹೋಗುತ್ತಿದ್ದೆ. ಅಂದು ದುಡ್ಡೆರಡು ದುಡ್ಡಿನ ಚುರಮುರಿಯನ್ನು ತಿಂದು ಆ ದಿವಸವನ್ನು ಕಳೆಯುತ್ತಿದ್ದೆ!

ಸುಶಿಕ್ಷಿತ ಭಾವನಾ ಜೀವಿಗಳಿಗೆ ಈ ದುಸ್ಥಿತಿಯೆಂದರೆ ಕೇವಲ ನರಕಲೋಕದ ಶಿಕ್ಷೆಯೇ ಅಲ್ಲವೇ? ನರೆಂದ್ರ ಈ ಎಲ್ಲ ಕಷ್ಟಗಳಿಗೂ ಎದೆಯೊಡ್ಡಿ ನಿಂತ. ಗೀತೆಯ ಉಪದೇಶದಂತೆ ಮತ್ತೆ ಮತ್ತೆ ಪ್ರಯತ್ನ ಮಾಡಿದ. ಕೊನೆಗೊಮ್ಮೆ ಸಣ್ಣದೊಂದು ಆಧಾರಸಿಕ್ಕಿತು. ಒಬ್ಬ ವಕೀಲರಲ್ಲಿ ನರೇಂದ್ರ ಕಾರಕೂನನಾಗಿ ನಿಂತ. ಮನೆತನದ ಖರ್ಚು ವೆಚ್ಚಗಳಿಗೆ ಅರ್ಧಮರ್ಧ ಅನುಕೂಲವಾಯಿತು. ಬಿಡುವಿನ ವೇಳೆಯಲ್ಲಿ ನರೇಂದ್ರ ಇಂಗ್ರೇಜಿ ಪುಸ್ತಕವನ್ನು ಬಂಗಾಲಿಗೆ ಭಾಷಾಂತರಿಸುತ್ತಿದ್ದ; ಅವುಗಳನ್ನು ಪ್ರಕಾಶಕರಿಗೆ ಮಾರುತ್ತಿದ್ದ; ಅಲ್ಪ ಸ್ವಲ್ಪ ಹಣವನ್ನು ದೊರಕಿಸುತ್ತಿದ್ದ. ಇವೆರಡು ಉತ್ಪನ್ನಗಳಿಂದ

ಸಂಸಾರರಥ ಮೆಲ್ಲನೆ ಮುನ್ನಡೆಯಿತು. ನಿರುದ್ಯೋಗದ ಉರಿ ಕಡಿಮೆಯಾಯಿತು.

ಈಗ ನರೇಂದ್ರನ ಲಕ್ಷ್ಯ ಮತ್ತೆ ಆಧ್ಯಾತ್ಮದ ಕಡೆ ಹೊರಳಿತು. ಆತನು ಬಿಡುವು ಸಿಕ್ಕಾಗ ಶ್ರೀ ರಾಮಕೃಷ್ಣ ಪರಮಹಂಸರನ್ನು ಕಾಣುತ್ತಿದ್ದ, ಅವರ ಉಪದೇಶವನ್ನು ಕೇಳುತ್ತಿದ್ದ. ಅವರ ಇದಿರಿಗೆ ಕುಳಿತಿರುವಷ್ಟು ಕಾಲವೂ ನರೇಂದ್ರನಿಗೆ ದೇವರ ಅಸ್ತಿತ್ವದ ಬಗೆಗೆ ಯಾವ ಸಂಶಯವೂ ಬರುತ್ತಿರಲಿಲ್ಲ. ಹೊರಗೆ ಬಂದ ಮೇಲೆ ಮಾತ್ರ ದೇವರು ಇದ್ದಾನೆಯೇ? ಆತನನ್ನು ತಾನು ನೋಡಬಲ್ಲೆನೇ? ಎಂಬ ವಿಷಯವು ಬಾಧಿಸಿಯೇ ಬಾಧಿಸುತ್ತಿತ್ತು. ಈ ಹೊಯ್ದಾಟ ದಲ್ಲಿ ಆತನಿನ್ನೂ ಬ್ರಹ್ಮೋ ಸಮಾಜವನ್ನು ಬಿಟ್ಟಿರಲಿಲ್ಲ. ತನ್ನ ಸಂಶಯುಗಳನ್ನೆಲ್ಲ ಹಾಗೆಯೇ ಇಟ್ಟುಕೊಂಡಿದ್ದ.

ಆದರೆ ಹೀಗೆಯೇ ತ್ರಿಶಂಕುವಿನ ಅವಸ್ಥೆಯಲ್ಲಿ ಎಷ್ಟು ದಿವಸ ಉಳಿಯುವದು ? ಕಡೆಗೊಮ್ಮೆ ನರೇಂದ್ರ ಗುರುಗಳಿದಿರಿಗೆ ತನ್ನ ಸಂಶಯವನ್ನು ಸ್ಪಷ್ಟವಾಗಿ ಮಂಡಿಸಿದ. ಅವರೂ ಅದಕ್ಕೆ ದೇವ ರನ್ನು ನಿನಗೆ ತೋರಿಸಬಲ್ಲೆ ' ಎಂದು ಸ್ಪಷ್ಟ ಶಬ್ದಗಳಿಂದ ಉತ್ತರ ಕೊಟ್ಟರು. ಈ ಧೀರವಾಣಿಯನ್ನು ನರೇಂದ್ರ ಈ ಮೊದಲು ಯಾರ ಬಾಯಿಂದಲೂ ಕೇಳಿರಲಿಲ್ಲ. ಈಗ ಅವನಿಗೆ ತನ್ನ ಮೇಲೆ ಅಮೃತದ ಮಳೆಗರೆದಂತಾಯಿತು. ಅದೇ ಆನಂದದಲ್ಲಿಯೇ ಎದ್ದು ಹೋಗಿ ಗುರುವಿನ ಪಾದಗಳನ್ನು ಗಟ್ಟಿಯಾಗಿ ಅಪ್ಪಿಕೊಂಡು ಬಿಟ್ಟ. ಆತನ ಆ ಮನೋಭಾವನೆಯಲ್ಲಿ ಅನನ್ಯ ಶರಣಾಗತಿ ತುಂಬಿ ತುಳುಕುತ್ತಿತ್ತು. ಗುರುವಿಗೂ ಮೈನವಿರೆದ್ದುವು. ಆನಂದಾಶ್ರುಗಳುಕ್ಕಿದುವು. ಕೂಡಲೆ ಅವರುಜಗದುದ್ಧಾರಕ ಶಿಷ್ಯನನ್ನು ಎತ್ತಿ ಅಪ್ಪಿಕೊಂಡರು. ಅವನ ಮೇಲೆ ಆನಂದ ಬಾಷ್ಪಗಳ ಮಳೆಗರೆದರು.

ಈ ಆನಂದ ಸಮಾಧಿಯಲ್ಲಿ ಅದೆಷ್ಟು ವೇಳೆ ಕಳೆಯಿತೋ ಅವರಿಗೆ ಅರಿವೇ ಇಲ್ಲ.

ಆ ಮೇಲೆ ಪರಮಹಂಸರು ಈಶ್ವರ ಭಕ್ತಿಯ ನಿಯಮ ನಿಬಂಧನೆಗಳನ್ನು ನರೇಂದ್ರನಿಗೆ ತಿಳಿಸಿದರು. ಅಂದು ಆತನಿಗೆ ಹೊಸಜೀವ ಪ್ರಾಪ್ತವಾದಷ್ಟು ಆನಂದವೆನಿಸುತ್ತಿತ್ತು. ಆದರೆ ಈ ಆನಂದ ನಿತ್ಯಾನಂದವಾಗುವುದಕ್ಕೆ ಇನ್ನೂ ಕಾಲಾವಕಾಶಬೇಕಾಗಿತ್ತು. ಕಷ್ಟವನ್ನೂ ಪಡಬೇಕಾಗಿತ್ತು.

ಈಗ ನರೇಂದ್ರ ಬ್ರಹ್ಮ ಸಮಾಜದಿಂದ ದೂರವಾದ. ಗುರುವಿನ ಆಜ್ಞೆಯಂತೆ ಈಶ್ವರ ಭಕ್ತಿಯನ್ನು ಸಾಗಿಸಿದ ಆದರೆ ಅದಕ್ಕೆ ಸಂಸಾರ ಬಂಧನ ಆಗಾಗ ಅಡ್ಡಿ ಬರುತ್ತಲೇಇತ್ತು. ದೇವ ಭಕ್ತಿಯಲ್ಲಿ ಚಿತ್ತ ಸ್ಥಿರವಾಗಿ ನಿಲ್ಲುತ್ತಿರಲಿಲ್ಲ. ಆದರೇನು? ಇತ್ತ ಸಂಸಾರವನ್ನು ತೊರೆಯುವಂತಿಲ್ಲ; ಅತ್ತ ಈಶ್ವರ ಭಕ್ತಿಯನ್ನು ಮರೆಯುವಂತಿಲ್ಲ. ಆದರೆ ಎರಡರಲ್ಲಿ ಒಂದನ್ನು ಗಟ್ಟಿಯಾಗಿ ಅಂಟಿಕೊಳ್ಳದೆ ಆತನ ಮನೋರಥ ಮುನ್ನಡೆಯುವಂತಿರಲಿಲ್ಲ. ಮಡದಿ ಮಕ್ಕಳ ಜೊಂಜಾಟವನ್ನಂತೂ ಆತನು ಅಂಟಿಸಿ ಕೊಂಡಿರಲೇ ಇಲ್ಲ. ಆದರೆ ಇದ್ದ ಮನೆತನದ ಉಪಜೀವನಕ್ಕೆ ತನ್ನಹೊರತು ಬೇರೆ ಗತಿಯಾರು? ಈ ಉಪಜೀವನದ ಉದ್ಯೋಗಕ್ಕೇ ಅಂಟಿಕೊಂಡರೆ ಈಶ್ವರ ಭಕ್ತಿಗೆ ಅವಕಾಶವೆಲ್ಲಿ? ಹಾಗಿದ್ದರೆ ಈಶ್ವರ ಭಕ್ತಿಯೆಂದು ಮನೆಯವರನ್ನು ನಡು ನೀರಿನಲ್ಲಿ ಕೈಬಿಡಬೇಕೇ? ಎಂತಹ ಧರ್ಮಸಂಕಟ! ಮನಸ್ಸಿನ ಒತ್ತಾಯ ಒಂದು ಕಡೆಗೆ ಪರಿಸ್ಥಿತಿಯ ಜಗ್ಗಾಟ ಇನ್ನೊಂದು ಕಡೆಗೆ! ನರೇಂದ್ರನಿಗೆ ಯಾವುದೂ ತಿಳಿಯದಾಯಿತು. ಕಡೆಗೆ ಗಟ್ಟಿಮನಸ್ಸಿನಿಂದ ತಾಯಿಯ ಇದಿರಿಗೆ ಈ ಮಾತನ್ನು ಹೇಳಿದ.

ಆ ಸಾಧ್ವಿಗೆ ಸಿಡಿಲು ಬಡಿದಂತಾಯಿತು. ಆದರೆ ಸಿಡಿದು ಹೋಗುವ ಮಗನನ್ನು ಹಿಡಿದು ನಿಲ್ಲಿಸುವದು ಯಾರಿಗೆ ಸಾಧ್ಯ,

ಎಲ್ಲಿಯತನಕ ಸಾಧ್ಯ ? ಅಲ್ಲದೆ ಅವನೇನು ಅಲ್ಲದ ಕೆಲಸಕ್ಕೆ ಒಪ್ಪಿಗೆಯನ್ನು ಕೇಳುತ್ತಿದ್ದಾನೆಯೇ ? ಆದರೆ ಮಗನು ಹೊರಟುಹೋದರೆ ಮುಂದೆ ಮನೆತನದ ಹೊಟ್ಟೆ ಬಟ್ಟೆಗೆ ಗತಿಯೇನು ? ಆಕೆಗೂ ಏನೂ ತಿಳಿಯಲಿಲ್ಲ. ನಿನ್ನ ಗುರುವಿನ ಹೇಳಿಕೆಯಂತೆ ಮಾಡು, ಎಂದಿಷ್ಟೇ ಹೇಳಿ ಸುಮ್ಮನಾದಳು.

ನರೇಂದ್ರನಿಗೆ ತಾಯಿಯ ಅರ್ಧಮರ್ಧ ಸಮ್ಮತಿ ಸಿಕ್ಕಂತಾಯಿತು. ಆತನು ನೇರವಾಗಿ ಗುರುವಿನ ಹತ್ತಿರಕ್ಕೆ ಹೋದ. ಸಂನ್ಯಾಸಿಯಾಗಬೇಕೆಂಬ ತನ್ನ ಹಂಬಲವನ್ನು ಅವರಿಗೆ ನಿವೇದಿಸಿಕೊಂಡ. ಹಿಂದು ಧರ್ಮ, ಹಿಂದು ಸಮಾಜ, ಹಿಂದುದೇಶಗಳ ಉದ್ಧಾರಕ್ಕೆ ಈತನೇ ಕಾರಣ ಪುರುಷನಾಗುವನೆಂದು ಗುರುವಿಗೆ ತಿಳಿದಿತ್ತು. ಇಂತಹ ದಿವ್ಯ ವ್ಯಕ್ತಿಗೆ ದೀಕ್ಷೆಯನ್ನು ಕೊಡದೆ ಇನ್ನಾರಿಗೆ ಕೊಡಬೇಕು ? ಅದರಿಂದ ಗುರುಗಳು ಆತನ ಮನೆತನವನ್ನೇ ತಮ್ಮ ಆಶ್ರಮಕ್ಕೆ ಸೇರಿಸಿಕೊಂಡರು. ಮತ್ತು ನರೇಂದ್ರನಿಗೆ ಸಂನ್ಯಾಸ ದೀಕ್ಷೆಯನು ಕೊಟ್ಟರು. ವಿವೇಕಾನಂದ ಸ್ವಾಮಿ ಎಂಬ ಹೆಸರಿಟ್ಟರು.

---




ಶ್ರೀ ರಾಮಕೃಷ್ಣ ಪರಮಹಂಸರು ಕೇವಲ ತಪೋನಿಧಿಗಳು, ದಿವ್ಯ ಜ್ಞಾನಿಗಳು, ಸಾತ್ವಿಕ ಮೂರ್ತಿಗಳು. ಇಂತಹರು ಗುರುಗಳಾದುದು ವಿವೇಕಾನಂದರಿಗೆ ಪ್ರತ್ಯಕ್ಷ ಪರಮೇಶ್ವರನೇ ದೊರೆತಂತಾಗಿತ್ತು. ಆದುದರಿಂದ, ವಿವೇಕಾನಂದರು ಅತ್ಯಂತ ನಿಷ್ಠೆಯಿಂದ ಹಗಲಿರುಳೂ ಗುರುಸೇವೆಯನ್ನು ಮಾಡುತ್ತಿದ್ದರು. ಪರಮಹಂಸರಲ್ಲಿ ಅನೇಕ ಜನ ಶಿಷ್ಯರಿದ್ದರು. ಅವರಲ್ಲಿ ಯಾರೂ ವಿವೇಕಾನಂದರಂತೆ ನಿಷ್ಠೆಯಿಂದ ನಡೆದುಕೊಳ್ಳುತ್ತಿರಲಿಲ್ಲ. ಏಕೆಂದರೆ, ಈಶ್ವರ ಸಾಕ್ಷಾತ್ಕಾರದ ಬಗೆಗೆ ಅವರಿಗೆ

ಅಷ್ಟೊಂದು ತೀವ್ರ ಆಸೆ ಇರಲಿಲ್ಲ. ಯಾವುದೊಂದು ಮಠದ ಮಹಾಸ್ವಾಮಿಯಾಗುವ ಮಟ್ಟಿಗೆ ಮಾತ್ರ ಅವರ ಮಹಾತ್ವಾಕಾಂಕ್ಷೆ. ವಿವೇಕಾನಂದರಿಗಾದರೊ ಈಶ್ವರ ಸಾಕ್ಷಾತ್ಕಾರದ ಚಿಂತೆಯೇ ಚಿಂತೆ.

ಈ ಶಿಷ್ಯರ ನಿಷ್ಠೆಯ ಪರೀಕ್ಷೆ ಒಮ್ಮೆ ನಡೆದೂ ಹೋಯಿತು. ಪರಮಹಂಸರಿಗೆ ಒಮ್ಮೆ ಕಂಠರೋಗವಾಯಿತು. ಡಾಕ್ಟರರು ಅದಕ್ಕೆ ಶಸ್ತ್ರ ಚಿಕಿತ್ಸೆ ಮಾಡಿದರು; ಮತ್ತು ಅದು ಸಾಂಸರ್ಗಿಕ ರೋಗವಾದುದರಿಂದ ಆ ಕೀವು ರಕ್ತಗಳನ್ನು ಯಾರೂ ಮುಟ್ಟಬಾರದೆಂದೂ ಅದನ್ನು ದೂರ ಚೆಲ್ಲಿಸಬೇಕೆಂದೂ ಶಿಷ್ಯರೆಲ್ಲ ರೋಗಿಯಿಂದ ಆದಷ್ಟು ದೂರವಿರಬೇಕೆಂದೂ ಹೇಳಿದರು. ವಿವೇಕಾನಂದರ ಹೊರತು ಎಲ್ಲ ಶಿಷ್ಯರೂ ಡಾಕ್ಟರರ ಅಪ್ಪಣೆಯಂತೆ ದೂರದೂರದಲ್ಲಿಯೇ ಇರಹತ್ತಿದ್ದರು. ವಿವೇಕಾನಂದರು ಮಾತ್ರ ದಿವಸದ ಇಪ್ಪತ್ತುನಾಲ್ಕು ತಾಸೂ ಗುರುಗಳ ಹಾಸಿಗೆಯ ಹತ್ತಿರವೇ ಇರುತ್ತಿದ್ದರು; ಕೈಮುಟ್ಟಿ ಅವರ ಸೇವೆ ಮಾಡುತ್ತಿದ್ದರು. ಅವರ ಮಲಮೂತ್ರ ಕೀವು ರಕ್ತಗಳನ್ನು ತಾವೇ ತೆಗೆದು ಚೆಲ್ಲುತ್ತಿದ್ದರು. ಇದಕ್ಕೆನ್ನಬೇಕು ಗುರುಸೇವೆ, ಗುರುನಿಷ್ಠೆ ! ಆ ಸೇವೆಯಿಂದ ಸಂತುಷ್ಟರಾದ ಪರಮಹಂಸರು “ಜಗತ್ತಿಗೇ ಸನ್ಮಾರ್ಗದರ್ಶಕನಾದ ಮಹಾತ್ಮನಾಗು. ನಿನಗೆ ಉತ್ತರೋತ್ತರ ಕಲ್ಯಾಣವಾಗಲಿ” ಎಂದು ಹರಸಿದರು.

ಗುರುವಿಗೆ ಬೇನೆ ತುಸು ವಾಸಿಯಾಯಿತು. ಇನ್ನು ತಾವು ಆಯುಷ್ಯದ ಅಂಚಿನಲ್ಲಿರುವೆವೆಂಬುದನ್ನು ತಮ್ಮ ಜ್ಞಾನದೃಷ್ಟಿಯಿಂದ ತಿಳಿದುಕೊಂಡಿದ್ದರು. ಇನ್ನು ಆಗಬೇಕಾದುದೆಲ್ಲ ವಿವೇಕಾನಂದರ ಮುಖಾಂತರವೇ ನಡೆಯಬೇಕಾಗಿತ್ತು. ಅದು ಕೂಡ ವಿಶ್ವವ್ಯಾಪಿಯಾದ ಮಹಾಕಾರ್ಯ. ಆದರಿಂದ ಪರಮಹಂಸರು ವಿವೇಕಾನಂದರನ್ನೇ ತಮ್ಮ ಪಟ್ಟ ಶಿಷ್ಯನನ್ನು ಮಾಡಿಕೊಂಡರು. ಮತ್ತು ಆತನಿಗೆ

ಆಧ್ಯಾತ್ಮದ 'ಓಂ ನಮಃ' ದಿಂದ ಆರಂಭಿಸಿ ಈಶ್ವರಸಾಕ್ಷಾತ್ಕಾರಕ್ಕೆ ಸಮಾಧಿಯನ್ನು ಹಚ್ಚುವವರೆಗೂ ಎಲ್ಲ ರಹಸ್ಯಗಳನ್ನು ತಿಳಿಸಿದರು. ಇವರಾದರೂ ಅವರ ಹಿರಿತನದಲ್ಲಿಯೇ ಎಲ್ಲ ವಿಧಾನಗಳನ್ನೂ ಬಳಕೆಯಲ್ಲಿ ತಂದರು; ಈಶ್ವರ ಸಾಕ್ಷಾತ್ಕಾರದ ಆನಂದವನ್ನು ಅನುಭವಿಸಹತ್ತಿದರು. ಈ ಗುರುಶಿಷ್ಯರ ಪ್ರಭಾವದಿಂದ ದಕ್ಷಿಣೇಶ್ವರದ ಕೀರ್ತಿ ದಿಗಂತದವರೆಗೂ ಹಬ್ಬಹತ್ತಿತು. ದೇಶವಿದೇಶಗಳ ವಿದ್ವಾಂಸರು ಆಧ್ಯಾತ್ಮ ಪರಿಚಯಕ್ಕಾಗಿ ಆಶ್ರಮಕ್ಕೆ ಬರುತ್ತಿದ್ದರು. ಗುರುವಿನ ವಾಣಿಯನ್ನು ವಿವೇಕಾನಂದರು ಪ್ರಭಾವಿಯಾದ ಇಂಗ್ರೇಜಿಯಲ್ಲ ಭಾಷಾಂತರಿಸಿ ಹೇಳುತ್ತಿದ್ದರು. ವಿವೇಕಾನಂದರ ತೇಜಸ್ವಿಯಾದ ವ್ಯಕ್ತಿತ್ವವನ್ನು ನೋಡಿಯೇ ಮುಗ್ಧರಾಗಿ ಬಿಡುತ್ತಿದ್ದರು ವಿದೇಶಿಯ ವಿದ್ವಾಂಸರು. ಆ ಮಾತಿನ ಮುರಲಿಯ ಮೋಹಕ ದನಿಯನ್ನು ಕೇಳಿದ ಮೇಲಂತೂ ಕಟಿದ ಕಲ್ಲು ಗೊಂಬೆಗಳಾಗುತ್ತಿದ್ದವು. ತಿರುಗಿ ಹೊರಡುವಾಗ, ಆ ಗುರು ಶಿಷ್ಯರ ದಿವ್ಯ ಮೂರ್ತಿಗಳನ್ನು ಕಣ್ಣು ಹೃದಯಗಳಲ್ಲಿ ತುಂಬಿಕೊಂಡು ಹೋಗುತ್ತಿದ್ದರು.

ಪರಮಹಂಸರು ಬರಬರುತ್ತ ಆ ಕಂಠರೋಗದಿಂದ ಬಹಳ ಅಶಕ್ತರಾದರು. ಅದರಿಂದ ಆಶ್ರಮದ ಸರ್ವಭಾರವೂ ವಿವೇಕಾನಂದರ ಮೇಲೆಯೇ ಬಿದ್ದಿತು. ಉಳಿದ ಶಿಷ್ಯರಿಗೆಲ್ಲ ದೇವರಪ್ರಾರ್ಥನೆ-ಪ್ರಾಣಾಯಾಮ-ಸಮಾಧಿ ಮುಂತಾದ ವಿಧಾನಗಳನ್ನು ಇವರೇ ಹೇಳುತ್ತಿದ್ದರು. ಬಂದ ಭಕ್ತರಿಗೆಲ್ಲ ವೇದ-ವೇದಾಂಗ-ಉಪನಿಷತ್ತು ಭಗವದ್ಗೀತೆಗಳ ಉಪದೇಶವನ್ನು ಇವರೇ ಮಾಡುತ್ತಿದ್ದರು. ಅವರ ಈ ರಸಾಲವಾಣಿಯಲ್ಲಿ ಜಿಜ್ಞಾಸು, ತೇಜಸ್ಸು, ಮಾಧುರ್ಯಗಳು ಗಂಗಾಪ್ರವಾಹದಂತೆ ಅಡೆತಡೆಯಿಲ್ಲದೆ ಹರಿಯುತ್ತಿದ್ದುವು. ಇದರಿಂದ ಪಾಠ-ಪ್ರವಚನಗಳ ವೇಳೆಯಲ್ಲಿ ಆಶ್ರಮವೆಲ್ಲ ಕಿಕ್ಕಿರಿದು ತುಂಬುತ್ತಿತ್ತು. ಈಗ ಯಾರ ಬಾಯಲ್ಲಿಯೂ ವಿವೇಕಾನಂದರ

ತುಂಬು ಹೆಸರು ತುಂಬಿಕೊಂಡು ಹೋಯಿತು. ಆದರೆ ಈ ಬಗೆಗೆ ವಿವೇಕಾನಂದರಿಗೆ ಎಳ್ಳಷ್ಟೂ ಹೆಮ್ಮೆಯಿಲ್ಲ. "ಗುರುದೇವನ ಕೃಪೆಯೇ ನನ್ನ ಯಶಸ್ಸಿಗೆ ಕಾರಣವೆಂದು ಯಾವಾಗಲೂ ಹೇಳುತ್ತಿದ್ದರು."

ಆದರೆ ಈ ದಿವ್ಯ ಗುರುಶಿಷ್ಯರ ಜೊತೆ ಬಹುಕಾಲ ಕೂಡಿ ಇರಲಿಲ್ಲ. ಪರಮಹಂಸರಿಗೆ ಕಂಠರೋಗ ದಿನದಿನಕ್ಕೆ ಬಲಿಯಿತು; ಅವರ ಮೈಯಲ್ಲಿ ಕಸುವು ಕುಂದಿತು. ಬಾಳಿನ ಸೂತ್ರ ತೀರಾ ಸಡಿಲಾಯಿತು. ಆಗ ಅವರು ಒಂದುದಿನ ವಿವೇಕಾನಂದರನ್ನು ಹತ್ತಿರ ಕರೆದರು– "ಮಗು, ಹಿಂದು ಧರ್ಮ ಈಗ ಬಹಳ ಸಂಕಟದಲ್ಲಿ ಸಿಕ್ಕಿಕೊಂಡಿದೆ. ಅದರ ಬಗೆಗೆ ಒಳದೇಶದಲ್ಲಿಯೂ ಹೊರ ದೇಶಗಳಲ್ಲಿಯೂ ಬಹಳ ತಪ್ಪು ತಿಳುವಳಿಕೆಯಾಗಿದೆ. ಇದೊಂದು ಅನಾಗರಿಕ ಧರ್ಮ ಎಂದು ಎಲ್ಲರೂ ತಿರಸ್ಕರಿಸುತ್ತಿದ್ದಾರೆ. ಇನ್ನು ಅದನ್ನು ಮೇಲೆತ್ತುವ ಹೊಣೆಗಾರಿಕೆ ನಿನ್ನದು. ನಾನು ನನ್ನ ಸರ್ವಸ್ವವನ್ನು ನಿನಗೆ ಧಾರೆ ಎರೆದಿರುವೆ. ನಿಜವಾಗಿಯೂ ನೀನೊಬ್ಬ ಕಾರಣ ಪುರುಷ. ನೀನು ಹಿಂದುಧರ್ಮವನ್ನು ಭರತಖಂಡದಲ್ಲಿ ಬೆಳಗಿಸಬೇಕು; ಹೊರನಾಡುಗಳಲ್ಲಿಯೂ ಹಬ್ಬಿಸಬೇಕು. ಇಂಗ್ಲಂಡ, ಅಮೇರಿಕಾ,ಜಪಾನ ಮುಂತಾದ ದೂರದೂರ ದೇಶಗಳಲ್ಲಿ ನಮ್ಮ ಧರ್ಮಧ್ವಜ ನಿಲ್ಲಬೇಕು. ಮಾತ್ರ, ಹಿಂದು ಧರ್ಮದ ನಿಜವಾದ ಔದಾರ್ಯವನ್ನೇ ನೀನು ಎಲ್ಲರಲ್ಲಿಯೂ ಬಿಂಬಿಸಬೇಕು. ಈಗ ದೇವ ಧರ್ಮಗಳ ಹೆಸರಿನಿಂದ ಅನೇಕ ದುರಾಚಾರ ನಡೆದಿವೆ, ಅವುಗಳನ್ನೆಲ್ಲ ಕಿತ್ತೊಗೆಯಬೇಕು; ಸನಾತನಧರ್ಮದ ಸಾರವನ್ನಷ್ಟೇ ಶೋಭೆಗೊಳಿಸಬೇಕು. ನಿನ್ನ ಈ ಕಾರ್ಯ ಸಂಪೂರ್ಣ ಯಶಸ್ವಿಯಾಗುವುದೆಂಬ ನಂಬಿಗೆ ನನಗಿದೆ;ಆಗಲಿ ಎಂದು ನನ್ನ ಸಂಪೂರ್ಣ ಆಶೀರ್ವಾದವೂ ಇದೆ......." ಎಂದು ಮುಂತಾಗಿ ಉಪದೇಶ

ಮಾಡಿದರು. ಮುಂದೆ ೧೮೮೬ನೆಯ ಜುಲೈ ೧೬ನೆಯ ದಿನಾಂಕಕ್ಕೆ ಈ ನಶ್ವರ ದೇಹವನ್ನು ಬಿಟ್ಟರು.

---

## ದೇಶದಾದ್ಯಂತ ಧರ್ಮ ದಿಗ್ವಿಜಯ

ಪರಮಹಂಸರು ಸಮಾಧಿಸ್ಥರಾದಮೇಲೆ ವಿವೇಕಾನಂದರು ತಾಯಿಯಿಲ್ಲದ ತಬ್ಬಲಿಯಂತಾದರು. ಆದರೂ ಒಂದು ಆಧಾರದ ಎಳೆ ಇತ್ತು. ರಮಹಂಸರ ಧರ್ಮಪತ್ನಿ ಶಾರದಾದೇವಿ ಅವರೂ ಪರಮ ಸಾಧ್ವಿಶಿರೋಮಣಿ. ವಿವೇಕಾನಂದರ ದುಃಖವನ್ನು ಅವರೇ ಶಮನ ಮಾಡಿದರು; ಇಷ್ಟೇ ಅಲ್ಲ ಗುರುವಿನ ಅಂತ್ಯ ಸಂದೇಶವನ್ನು ಕೊನೆಗಾಣಿಸುವದಕ್ಕೆ ಅವರಿಗೆ ಹುರುಪು-ಹುಮ್ಮಸುಗಳನ್ನು ಕೊಟ್ಟರು. ಶಾರದಾದೇವಿಯನ್ನು ಆಶ್ರಮವಾಸಿಗಳೆಲ್ಲ ಮಾತಾಜಿ ಎಂದು ಕರೆಯುತ್ತಿದ್ದರು. ಏಕೆಂದರೆ ತಾಯಿಯ ಮಮತೆಯ ಕರುಳಿನಿಂದಲೇ ಎಲ್ಲರನ್ನು ಜೋಪಾನ ಮಾಡುತ್ತಿದ್ದರು.

ವಿವೇಕಾನಂದರು ಮಾತಾಜಿಯವರ ಮಾತುಗಳನ್ನು ಬರಿಯ ಆದೇಶ ಇಲ್ಲವೆ ಒಪ್ಪಿಗೆಯೆಂದು ತಿಳಿಯಲಿಲ್ಲ. ಮಾತಾಜಿಯವರ ಮುಖದಿಂದ ದೇವತಾ ವರದಾನವೇ ಆಯಿತೆಂದು ನಂಬಿದರು. ಅವರು ತೆರಪಿಲ್ಲದ ಆಶ್ರಮದ ಕಾರ್ಯಗಳನ್ನು ಮಾತಾಜಿಗೂ ಉಳಿದ ಶಿಷ್ಯರಿಗೂ ಒಪ್ಪಿಸಿದರು. ಎಲ್ಲರ ಹರಕೆ- ಹಾರೈಕೆಗಳನ್ನು ಪಡೆದು ಆಶ್ರಮದಿಂದ ಬೀಳ್ಕೊಂಡರು.

ವಿವೇಕಾನಂದ ಸ್ವಾಮಿಗಳು ಮೊದಲು ಒಳದೇಶದಲ್ಲಿ ಅತ್ತಿತ್ತ ಸಂಚಾರ ಮಾಡಿದರು. ಹಿಂದು ಧರ್ಮ ಮತ್ತು ಹಿಂದುಗಳ ಸ್ಥಿತಿ ಎಷ್ಟು ಶೋಚನೀಯವಾಗಿತ್ತು ! ಹಿಂದು ಧರ್ಮ ಮತ್ತು ಆದರ ಸತ್ಯ

ತತ್ವಗಳ ಅರಿವು ಯಾರಿಗೂ ಇಲ್ಲ. ೧೦೦ಕ್ಕೆ ೯೦ರಷ್ಟು ಜನ ನಿರಕ್ಷರಿಗಳು. ಅವರಿಗೆ ಕಲ್ಲು ಕಟ್ಟಿಗೆಗಳೇ ಪರದೈವತಗಳು. ಉಳಿದ ೧೦ರಷ್ಟು ಜನ ಗಿಳಿಯಂತೆ ಪರದೇಶಿಯರ ವಿದ್ಯೆಯನ್ನು ಪರದೇಶಿಯರ ವಿಚಾರಗಳನ್ನು ಅರಿತವರು. ಅವರಿಗೆ ಹಿಂದು ಧರ್ಮವೆಂದರೆ ಹುಚ್ಚರ ಹಂಬಲು. ದೇವರಿಲ್ಲವೆಂದೇ ಇವರ ವಾದ. ಸಮಾಜದಲ್ಲಿಯೇ ನೂರೆಂಟು ಜಾತಿ ವಿಜಾತಿಗಳು ಹೆಜ್ಜೆಹೆಜ್ಜೆಗೆ ನಾಮೇಲು ತಾಮೇಲುಗಳ ಬಡಿದಾಟ. ಸಹಾನುಭೂತಿ ಸಹಕಾರ ಐಕ್ಯಗಳ ಮಾತೇ ಇಲ್ಲ; ಎಂದಮೇಲೆ ಅಖಂಡ ರಾಷ್ಟ್ರೀಯ ಭಾವನೆಯಂತೂ ದೂರದಲ್ಲಿಯೇ ಉಳಿಯಿತು. ಯಾವ ಸಮಾಜದಲ್ಲಿ ನೋಡಿದರೂ ರೂಢಿಯ ಮೂಢತನವೇ– ಮೂಢನಂಬಿಕೆಯೇ– ಧರ್ಮ. ಈ ಧರ್ಮದ ಹೆಸರಿನಿಂದ ಡೊಂಬೆಯ ದುರಂತಗಳು. ಮತ್ತೆ ಸುಶಿಕ್ಷಿತ ಒಂದು ಗಳಲ್ಲಿಯೇ ಆರ್ಯಸಮಾಜ, ಸತ್ಯಸಮಾಜ ಪ್ರಾರ್ಥನಾ ಸಮಾಜಗಳ ಗಲಾಟೆ. ಎಲ್ಲರೂ ತಮ್ಮ ತಮ್ಮ ಪಕ್ಷವನ್ನೇ ಬೆಳೆಸುವದಕ್ಕೆ ಸೆಣಸಾಡುವವರು. ಹಿಂದುಧರ್ಮದ ಸತ್ಯ ತತ್ವಗಳನ್ನೇ ಇವರು ಅರಿಯರು. ಇವರ ದುರುಪಯೋಗ ಮಾಡಿಕೊಂಡು ಮುಸಲ್ಮಾನ, ಕ್ರಿಸ್ತಿ ಧರ್ಮೀಯರು ಸಮಯ ಸಿಕ್ಕಾಗಲೆಲ್ಲ ಹಿಂದುಗಳನ್ನು ಧರ್ಮಾಂತರ ಮಾಡುತ್ತಿದ್ದರು. ಒಳ್ಳೇ ಕಲಿತವರು ಕೂಡಾ ಪರಧರ್ಮವನ್ನು ಸೇರುತ್ತಿದ್ದರು. ಒಟ್ಟಾರೆ ಹಿಂದುಧರ್ಮ ಹಾಳಾಗಿ ಹೇಳಹೆಸರಿಲ್ಲದೆ ಹೋಗುವ ಹೊತ್ತು ಬಂದಿತ್ತು. ಈ ದುಃಸ್ಥಿತಿ ಸ್ವಾಮಿಗಳ ಕರುಳುಗಳನ್ನೇ ಕೊರೆಯಿತು. ಭಾರತೀಯರ ಮನೋಭೂಮಿ ಈಗ ಬೆಳೆಬಾರದ ಬಂಜರು ಭೂಮಿಯಾಗಿತ್ತು. ಅದರ ಮೇಲೆ ಉಪದೇಶದ ಅಮೃತದ ಮಳೆಯನ್ನು ಸುರಿಸತೊಡಗಿದರು ವಿವೇಕಾನಂದ ಸ್ವಾಮಿಗಳು.

ಹಿಂದುಧರ್ಮದ ಬಗೆಗೆ ಅವರು ಮಾಡಿದ ಉಪನ್ಯಾಸಗಳು ಒಂದಲ್ಲ, ಎರಡಲ್ಲ, ಎಣಿಕೆಗೆ ನಿಲುಕವಂತೆಯೂ ಇಲ್ಲ. ಇವೆಲ್ಲವುಗಳ ಸಾರವನ್ನು ತುಸುದರಲ್ಲಿಯೇ ತಿಳಿಸಬಹುದಾದರೆ:

"ದೇವರು ಒಬ್ಬನೇ. ಆತನೇ ಈ ಜಗತ್ತನ್ನು ಹುಟ್ಟಿಸಿದ; ಆತನೇ ಇದನ್ನು ನಡೆಸುತ್ತಾನೆ. ನಾವೆಲ್ಲರೂ ಆತನ ಮಕ್ಕಳು. ಆದುದರಿಂದ ನಾವೆಲ್ಲರೂ ಒಡಹುಟ್ಟಿದ ಅಣ್ಣತಮ್ಮಂದಿರು; ಅಕ್ಕ ತಂಗಿಯರು. ನಾವೆಲ್ಲರೂ ಸಮಾನರು. ನಮ್ಮಲ್ಲಿ ಹೆಚ್ಚು ಕಡಿಮೆ ಎಂದು ಹೇಳಿ ಕೊಳ್ಳುವದು ಹುಚ್ಚುತನ. ಅಂತಹ ವಂಚಕರನ್ನು ದೇವರು ಮೆಚ್ಚುವುದಿಲ್ಲ. ನಾವೆಲ್ಲರೂ ನಮ್ಮ ತಂದೆಯ ಒಳ್ಳೆಯ ಮಕ್ಕಳಾಗಬೇಕು. ಆತನ ಪ್ರೇಮ- ಅನುಗ್ರಹಗಳನ್ನು ಸಂಪಾದಿಸಲು ಪ್ರಯತ್ನಿಸಬೇಕು. ಅದಕ್ಕಾಗಿ ನಿತ್ಯವೂ ಆತನನ್ನು ಭಕ್ತಿಯಿಂದ ಭಜಿಸಬೇಕು. ಸದಾಚಾರವೇ ಆತನನ್ನು ಒಲಿಸುವ ಮತ್ತೊಂದು ಮಾರ್ಗ. ಪರೋಪಕಾರ, ಒಬ್ಬರಿಗೊಬ್ಬ, ಸಹಕಾರ,ಸಹಾನುಭೂತಿಗಳಿಂದ ವರ್ತಿಸುವದು ಸತ್ಯವನ್ನೇ ನುಡಿಯುವದು. ಸೇವಾತ್ಯಾಗಗಳಿಗೆ ಸಿದ್ಧರಾಗುವದು. ಇವೇ ಮುಂತಾಗಿ ಸದಾಚಾರಗಳು. ನಿಜವಾದ ಹಿಂದುಧರ್ಮ ಇದನ್ನೇ ಹೇಳುತ್ತಿದೆ. ಇಂತಹ ರತ್ನವನ್ನು ನಾವಿಗ ಕಸದಲ್ಲಿ ಚೆಲ್ಲಿದ್ದೇವೆ. ಮಂದಿಯ ಮನೆಯ ಮುಂದಿನ ಕಾಜಿನ ಒಡಕು ಚೂರಿಗೆ ಮೋಹಿಸುತ್ತಿದ್ದೇವೆ. ಈಶ್ವರ ಪ್ರಾಪ್ತಿಗೆ ಹಿಂದುಧರ್ಮ ಹೇಳುವಷ್ಟು ಹಗುರಾದ ಹಾದಿ ಬೇರೆ ಯಾವ ಧರ್ಮದಲ್ಲಿಯೂ ಇಲ್ಲ...." ಮುಂತಾಗಿ.

ವಿವೇಕಾನಂದ ಸ್ವಾಮಿಗಳು ಮೊದಲೇ ತುಂಬಿದ ದೇಹವುಳ್ಳವರು; ಮೇಲೆ ನಿತ್ಯ ಬ್ರಹ್ಮಚಾರಿಗಳು! ಆ ಮುದ್ದಾದ ದುಂಡನೆಯ ಮುಖ ಬ್ರಹ್ಮಚರ್ಯದ ತೇಜದಿಂದ ಮಿರಿಮಿರಿ ಮಿರುಗುತ್ತಿತ್ತು.

ಕಣ್ಣುಗಳಂತೂ ಕಮಲಗಳನ್ನು ತಿರಸ್ಕರಿಸುವಂತಿದ್ದುವು. ಆಳ್ತನವೂ ಅಷ್ಟೇ ಆಕರ್ಷಕ. ಸಾಧಾರಣ ಎತ್ತರವಾದ ನಿಲುವಿಕೆ; ಗಾಡಕ್ಕೆ ಹಚ್ಚಿ ಕಂಡರಿಸಿದಂತಹ ಮಾಂಸಲವಾದ ಮೈಕಟ್ಟು. ಇದೆಲ್ಲಕ್ಕೂ ಅನುಕೂಲವಾಗಿ ಮಾಧವನ ಮುರಲಿಯಂತಹ ಮನೋಹರವಾದ ದನಿ, ಅಥವಾ ವಾಣೀದೇವಿಯ ವೀಣಾ ನಿನಾದವೆಂದರೂ ಸರಿಯೇ. ಆ ಮೋಹಕ ಸ್ವರದಲ್ಲಿ ಅಖಂಡವಾಗಿ ಹೊರಡುವ ವಿದ್ವತ್ತಾ ವಿಚಾರ ಪೂರ್ಣವಾದ ಮಾತುಗಾರಿಕೆ ಭಾಷೆಯ ಬೆಡಗನ್ನಂತೂ ಬಲ್ಲವರೇ ಬಲ್ಲರು. ಇವೆಲ್ಲವುಗಳ ಪರಿಣಾಮವಾಗಿ ಹಿಂದು ಧರ್ಮಕ್ಕೆ ಮತ್ತೆ ಬಿಸಿಬಿಸಿ ಉಸಿರಾಡಹತ್ತಿತು. ಹಿಂದುಗಳಿಗೆ ತಮ್ಮ ನಿಜ ಧರ್ಮದ ಅರಿವಾಯಿತು. ಅವರಲ್ಲಿ ಆ ಬಗೆಗೆ ಅಭಿಮಾನ ಹುಟ್ಟಿತು. ನಾಸ್ತಿಕ ಧರ್ಮ ಮೆಲ್ಲಮೆಲ್ಲನೆ ಮರೆಯಾಯಿತು; ಆಸ್ತಿಕ ಧರ್ಮ ಬಳಕೆಯಲ್ಲಿ ಬಂದಿತು. ಹಿಂದು ಧರ್ಮವನ್ನು ಬಿಟ್ಟುಹೋದ ಎಷ್ಟೋ ಜನರು ಮತ್ತೆ ಸಂತೋಷದಿಂದ ಹಿಂದುಗಳಾದರು. ಸಮಾಜವಲ್ಲಿಯ ಕೀಳು ಮೇಲುಗಳೂ ರೂಢಿ ಮೂಢತನಗಳೂ ಮಾಯವಾದುವು. ಜಾತಿಯ ಜಂಭ ಎಷ್ಟೋ ಕಡಿಮೆಯಾಯಿತು. ಜನರಲ್ಲಿ ಸಹಕಾರ, ಸಹಾನುಭೂತಿಗಳು ಹೆಚ್ಚಿದುವು. ಅದರಿಂದ ಅಖಂಡ ರಾಷ್ಟ್ರೀಯ ಭಾವನೆಯ ಬೀಜಾರೋಪಣವೂ ಆಯಿತು.

ಇಷ್ಟೆಲ್ಲ ಪರಿಣಾಮವಾಗುವದಕ್ಕೆ ಸ್ವಾಮಿಗಳವರ ನಿಸ್ಪೃಹ ವೃತ್ತಿಯೂ ಕಾರಣವಾಗುತ್ತಿದ್ದಿತು. ಉಪನ್ಯಾಸಕ್ಕೆ ನಿಂತಕೂಡಲೆ ಅವರು ಮೌನವಾಗಿ ಒಂದೆರಡು ನಿಮಿಷ ಗುರುದೇವರನ್ನು ಧ್ಯಾನಿಸುತ್ತಿದ್ದರು. ಕೂಡಲೆ ಅವರ ದೇಹದಲ್ಲಿ ವಿದ್ಯುತ್ ಸಂಚಾರವಾದಂತಾಗುತ್ತಿತ್ತು; ಮುಖದಮೇಲೆ ದೈವೀಕಳೆಯು ಮಿರುಗುತ್ತಿತ್ತು. ಆಮೇಲೆ ಅವರು ಯಾರ ದಯಾ ದಾಕ್ಷಿಣ್ಯಗಳಿಗೂ ವಶರಾಗದಂತೆ ಹೇಳತಕ್ಕುದನ್ನು ಖಂಡತುಂಡಾಗಿ ಮಾತಾಡುತ್ತಿದ್ದರು. ಸಮಾಜದಲ್ಲಿ

ಯ ಮೂಢ ನಂಬಿಕೆಗಳನ್ನೂ, ಸೋಗಿನ ಸಮಾಜ ಧುರೀಣರನ್ನೂ ತುಂಬಿದ ಸಭೆಯಲ್ಲಿಯೇ ಖಂಡಿಸುತ್ತಿದ್ದರು. ಸ್ವಾಮಿಗಳ ಈ ನಿರ್ಭೀಕ ವೃತ್ತಿಯು ಸಹೃದಯರೆಲ್ಲರ ಮನಸ್ಸನ್ನು ಮೆಚ್ಚಿಸಿತು; ಒಣ ಹೆಮ್ಮೆಯವರನ್ನು ಒಳಿತಾದ ಹಾದಿಗೂ ಹಚ್ಚಿತು.

ಸ್ವಾಮಿಗಳು ಸಂಚರಿಸುತ್ತ ಸಂಚರಿಸುತ್ತ ಒಮ್ಮೆ ಜಯಪುರ ಸಂಸ್ಥಾನಕ್ಕೆ ಹೋದರು. ಅಲ್ಲಿಯ ಸಂಸ್ಥಾನಿಕ ಮಹಾ.ನಾಸ್ತಿಕ. ಅಲ್ಲದೆ ರಾಜಕಾರಣವನ್ನೂ ಕೂಡ ಲಕ್ಷಿಸದೆ ಯಾವಾಗಲೂ ಕಾಡು ಮೃಗಗಳ ಬೇಟೆಯಲ್ಲಿಯೇ ಕಾಲ ಕಳೆಯುತ್ತಿದ್ದ. ಆದರೆ ಅವನ ಮಂತ್ರಿ ಒಳ್ಳೇ ವಿದ್ವಾಂಸ; ಆಸ್ತಿಕ. ಆತನು ವಿವೇಕಾನಂದ ಸ್ವಾಮಿಗಳ ಕೀರ್ತಿಯನ್ನು ಕೇಳಿದ್ದ; ಅವರನ್ನು ಪ್ರತ್ಯಕ್ಷವಾಗಿ ನೋಡಬೇಕೆಂಬ ಹಂಬಲವನ್ನು ಇಟ್ಟುಕೊಂಡಿದ್ದ. ಈಗ ಅನಾಯಾಸವಾಗಿ ಸಮಯವೊದಗಿತು. ಆದರಿಂದ, ಆತನು ತನ್ನ ಸಂಸ್ಥಾನಿಕನಿಗೆ ಈ ಎಲ್ಲ ಸಂಗತಿಯನ್ನು ತಿಳಿಸಿದ. ಸ್ವಾಮಿಗಳು ಆಂಗ್ಲ ಪದವೀಧರರೆಂಬ ಮಾತು ಸಂಸ್ಥಾನಿಕನಿಗೆ ವಿಲಕ್ಷಣವಾಗಿ ತೋರಿತು. ಅವನು ಮಂತ್ರಿಯ ಮಾತಿನಂತೆ ಸ್ವಾಮಿಗಳ ದರ್ಶನಕ್ಕೆ ಹೊರಡುವುದಾಗಿ ಹೇಳಿ ಕಳುಹಿದ.

ಸ್ವಾಮಿಗಳು ಸರಕಾರಿ ಧರ್ಮಶಾಲೆಯಲ್ಲಿಯೇ ಉಳಿದಿದ್ದರು. ಸಂಸ್ಥಾನಿಕ ಮಂತ್ರಿಯೊಡನೆ ಅಲ್ಲಿಗೆ ಹೋದ; ನಮಸ್ಕಾರಗಳನ್ನು ಸಲ್ಲಿಸಿದ. ಸ್ವಾಮಿಗಳೂ ಅವರನ್ನು ಮನ್ನಣೆಯಿಂದ ಕುಳ್ಳಿರಿಸಿಕೊಂಡರು. ಮಾತುಕತೆ ಆರಂಭವಾಯಿತು. "ನೀವು ಬಿ. ಎ. ಪದವಿಯನ್ನು ಪಡೆದವರು ಬುದ್ಧಿವಂತರೆಂದು ನಿಮ್ಮ ಪ್ರಸಿದ್ಧಿಯಿದೆ ಎಂದಮೇಲೆ ನೀವು ನೌಕರಿಮಾಡಿ ಹಣಗಳಿಸುವದನ್ನು ಬಿಟ್ಟು ಸನ್ಯಾಸಿಗಳಾದುದೇಕೆ? ಜನರಿಗೆ ಈ ಧರ್ಮದ ಒಣ ಉಪದೇಶ ಮಾಡು

ವದರಿಂದ ನಿಮಗೇನು ಲಾಭ?" ಸಂಸ್ಥಾನಿಕ ಒಳ್ಳೆಯ ಆಧ್ಯತೆ ಯಿಂದಲೇ ಕೇಳಿದ.

"ನೀವು ಈ ಸಂಸ್ಥಾನದ ಒಡೆಯರು. ಎಂದಮೇಲೆ ಅವರ ಆಡಳಿತವನ್ನು ಒಳಿತಾಗಿ ನಾಗಿಸಿ ಬೊಕ್ಕಸವನ್ನು ಭರತಿ ಮಾಡುವದು ನಿಮ್ಮ ಕೆಲಸ. ಅದನ್ನು ಬಿಟ್ಟು ಕಾಡುಮೃಗಗಳ ಬೆನ್ನಟ್ಟಿ ಅಡವಿ ಅಡವಿ ತಿರುಗಿ ಬೇಟೆಯಾಡುತ್ತೀರಲ್ಲ? ಇದರಿಂದ ನಿಮಗೇನು ಪ್ರಯೋಜನ?" ಸ್ವಾಮಿಗಳು ಸ್ಪಷ್ಟ ಶಬ್ದಗಳಿಂದ ಮರುಸವಾಲು ಹಾಕಿದರು.

"ಸಂಸ್ಥಾನದ ಆಡಳಿತವನ್ನು ನಡೆಸುವದಕ್ಕೆ ಬೇರೆ ಅಧಿಕಾರಿಗಳಿದ್ದಾರೆ. ಬೇಟೆಯಾಡುವದೆಂದರೆ ಬಲುಪ್ರೀತಿ ನನಗೆ!" ಸಂಸ್ಥಾನಿಕ ಎಗ್ಗಿಲ್ಲದೆ ಉತ್ತರವನ್ನು ಕೊಟ್ಟ.

"ನೌಕರಿಮಾಡಿ ಹಣ ಸಂಪಾದಿಸುವದಕ್ಕೆ ಬೇರೆ ಪದವೀಧರರು ಇದ್ದಾರೆ. ಜನರಿಗೆ ಧರ್ಮೋಪದೇಶ ಮಾಡುವುದೆಂದರೆ ಬಲು ಪ್ರೀತಿ ನನಗೆ." ಸ್ವಾಮಿಗಳು ಮತ್ತಗೇ ಪೆಟ್ಟನ್ನು ಕೊಟ್ಟರು.

"ನೀವು ಈ ಕಲ್ಲು ಕಟ್ಟಿಗೆಗಳ ಮೂರ್ತಿಗಳನ್ನು ಪೂಜಿಸಲು ಹೇಳುತ್ತೀರಿ. ಅದರಲ್ಲಿ ದೇವರಿರುವದು ಹೇಗೆ? ಆ ಕಲ್ಲಿನಲ್ಲಿ ದೇವರಿರುವದಾದರೆ, ಈ ಗೋಡೆಯ ಕಲ್ಲುಗಳಲ್ಲಿಯೂ ಏಕಿರಬಾರದು? ಎಂದಮೇಲೆ ಈ ಕಲ್ಲಿಗೂ ಆ ಕಲ್ಲಿಗೂ ಹೆಚ್ಚು ಕಡಮೆಯೇನು?"

ಧರ್ಮಶಾಲೆಯ ಗೋಡೆಯಮೇಲೆ ಸಂಸ್ಥಾನಿಕನ ದೊಡ್ಡ ಫೋಟೋ ಇತ್ತು. ಅದನ್ನು ಹೂ ಮಾಲೆಯಿಂದ ಸಿಂಗರಿಸಿದ್ದರು. ಅದರ ಜೊತೆಯಲ್ಲಿಯೇ ಹಾಗೆಯೇ ಅನೇಕ ಭಾವಚಿತ್ರಗಳಿದ್ದವು. ಸ್ವಾಮಿಗಳು ಆ ಚಿತ್ರಗಳ ಕಡೆಗೆ ರಾಜನ ಲಕ್ಷವನ್ನೆಳೆದರು; ಮತ್ತು ಈ ಗೋಡೆಯ ಮೇಲೆ ಹಲವು ಫೋಟೋಗಳಿವೆ. ಭಾವಚಿತ್ರಗಳೆಂದರೆ ಎಲ್ಲವೂ ಅಷ್ಟೇ. ಆದರೆ ನಿಮ್ಮದೇ ಭಾವಚಿತ್ರಕ್ಕೆ ಹೂ ಮಾಲೆ

ಹಾಕಲು ಕಾರಣವೇನು? ಜನರು ಅದನ್ನು ಬರಿಯ ಭಾವಚಿತ್ರ ವೆಂದು ನೋಡುತ್ತಿಲ್ಲ ಅದರ ಹಿಂದೆ ತಮ್ಮ ದೊರೆ ಇದ್ದಾನೆಂದು ಅವರ ಕಲ್ಪನೆ. ಅದಕ್ಕೆ ಹಾಕಿದವಾಲೆ ನಿಮಗೆ ಮುಟ್ಟಿದಂತೆ ಎಂದು ಅವರ ತಿಳುವಳಿಕೆ. ನಿಮಗೂ ಅದರಿಂದಲೇ ಸಂತೋಷವಾಗಿದೆ. ಅಂತಹ ಜನರ ಮೇಲೆ ನೀವೂ ಪ್ರೇಮ ಮಾಡುತ್ತಿದ್ದೀರಿ. ಈಗ ನಾನು ಹೇಳಿದುದು ಸತ್ಯವೋ ಅಸತ್ಯವೋ ಸ್ಪಷ್ಟವಾಗಿ ಹೇಳಿರಿ."

ಸ್ವಾಮಿಗಳ ಮಾತು ಕೇಳುತ್ತ ಸಂಸ್ಥಾನಿಕನ ಕಣ್ಣಲ್ಲಿ ನೀರು ಹೊರ ಹೊಮ್ಮಿದವು. ಅವನ ಮಸ್ತಕ ತಾನಾಗಿಯೇ ಮಣಿಯಿತು. ಅವನು ಸ್ವಾಮಿಗಳ ಪಾದಗಳನ್ನು ಬಿಗಿಯಾಗಿ ಅಪ್ಪಿಕೊಂಡು ಬಿಟ್ಟ. ಸ್ವಾಮಿಗಳು ಆತನ ಮೈದಡವುತ್ತ ಹೇಳಿದರು. "ಮೂರ್ತಿ ಪೂಜೆಯ ವಿಚಾರವು ಹೀಗೆಯೇ ಇದೆ. ಭಕ್ತರು ಅದನ್ನು ಬರಿಯ ಕಲ್ಲು ಕಟ್ಟಿಗೆಗಳೆಂದು ಅವುಗಳನ್ನು ಪೂಜಿಸುವದಿಲ್ಲ; ಅವುಗಳೊಳಗೆ ತಮ್ಮ ಇಷ್ಟ ದೇವತೆಯನ್ನು ಕಲ್ಪಿಸುತ್ತಾರೆ; ಪೂಜಾ ಪುರಸ್ಕಾರಗಳನ್ನು ಮಾಡುತ್ತಾರೆ."

ಸಂಸ್ಥಾನಿಕ ಅಂದಿನಿಂದಲೇ ಸ್ವಾಮಿಗಳ ಪರಮ ಶಿಷ್ಯನಾದ. ಅಲ್ಲಿ ಅವರಿರುವಷ್ಟು ಕಾಲ ದಿನವೂ ಅವರ ಉಪದೇಶವನ್ನು ಕೇಳಲು ಹೋಗುತ್ತಿದ್ದ. ಮುಂದೆ ಆತನು ಒಳ್ಳೆ ಆಸ್ತಿಕನಾದ.

ಇದರಂತೆ ಸ್ವಾಮಿಗಳು ಎಷ್ಟೋ ನಾಸ್ತಿಕರನ್ನು ಸವಿಮಾತಿನಿಂದಲೇ ಆಸ್ತಿಕಮಾರ್ಗಕ್ಕೆ ತಂದರು. ಹಾಗೆಯೇ ಸಂಚರಿಸುತ್ತ ಮದ್ರಾಸಕ್ಕೆ ಬಂದರು. ಅಲ್ಲಿ ಬಹುಜನರು ಇವರ ಶಿಷ್ಯರಾದರು. ಸ್ವಾಮಿಗಳೂ ಅಲ್ಲಿಯೇ "ರಾಮಕೃಷ್ಣ ಮಿಶನ್" ಸ್ಥಾಪಿಸಿ ತಮ್ಮ ಮುಖ್ಯ ವಸತಿಯನ್ನು ಮಾಡಿಕೊಂಡರು. ಪಾರ್ಥಸಾರಥಿ ಶ್ರೀ ಕೃಷ್ಣ ದೇವಾಲಯ ಸ್ಥಾಪಿತವಾಯಿತು. ಭಗವದ್ಗೀತಾ ಪಾರಾಯಣ

ಅಲ್ಲಿ ನಿತ್ಯವೂ ನಡೆಯುತ್ತಿತ್ತು. ಇದೇ ಮಿಶನದ ಅನೇಕ ಶಾಖೆಗಳು ಪ್ರಾಂತದ ತುಂಬ ಪಸರಿಸಿದವು.



## ೭. ಚಿಕಾಗೋದಲ್ಲಿ ಚಟುವಟಿಕೆಗಳು.

ಸ್ವಾಮಿ ವಿವೇಕಾನಂದರು ಹೀಗೆಯೇ ಅಯ್ದಾರುವರುಷ ಭಾರತ ತುಂಬ ಸಂಚಾರ ಮಾಡಿದರು; ಎಲ್ಲೆಲ್ಲಿಯೂ ರಾಮಕೃಷ್ಣ ಭಕ್ತಿ ಪಂಥವನ್ನು ಹಬ್ಬಿಸಿದರು. ಎಲ್ಲಿ ಹೋದಲ್ಲಿ ಸ್ವಾಮಿಗಳವರಿಗೆ ಅಭೂತಪೂರ್ವ ಮಾನಮನ್ನಣೆ ದೊರೆಯುತ್ತಿತ್ತು. ಇವರ ಉಪನ್ಯಾಸವನ್ನು ಕೇಳಲು ಜಾತ್ರೆ ನೆರೆವಂತೆ ಜನಸಂದಣಿ ಕಿಕ್ಕಿರಿಯುತ್ತಿತ್ತು. ಇವರ ಉಪದೇಶದಿಂದಾಗಿ ಹಿಂದುಧರ್ಮದ ನಿಜವಾದ ತೇಜ ಜನಸಾಮಾನ್ಯರಿಗೆಲ್ಲ ತಿಳಿಯಿತು. ಈವರೆಗೆ ಸ್ವಾಮಿಗಳು ತಮ್ಮ ಗುರುವಿನ ಅಪ್ಪಣೆಯ ಅರ್ಧಭಾಗವನ್ನು ಪೂರಯಿಸಿದಂತಾಯಿತು. ಇನ್ನುಳಿದ ಅರ್ಧಭಾಗವೆಂದರೆ ಪರದೇಶಗಳಲ್ಲಿ ಹಿಂದುಧರ್ಮದ ಧ್ವಜವನ್ನು ಎತ್ತಿ ಹಿಡಿಯುವದು. ಇದು ದುಡ್ಡಿನ ದೃಷ್ಟಿಯಿಂದಾಗಲಿ ಕಾರ್ಯಭಾರದ ದೃಷ್ಟಿಯಿಂದಾಗಲಿ ಸಣ್ಣ ಕೆಲಸವಾಗಿರಲಿಲ್ಲ. ಆದರಿಂದ, ಸ್ವಾಮಿಗಳು ತುಸು ಹೊಯ್ದಾಟದಲ್ಲಿ ಬಿದ್ದರು.

ಆದರೆ ಅವರ ಭಕ್ತರೆಲ್ಲರಿಗೂ ಸ್ವಾಮಿಗಳವರ ವಿದ್ವತ್ತೆ, ವಾಕ್-ಶಕ್ತಿಗಳಲ್ಲಿ ತುಂಬಾ ನಂಬಿಗೆ. ಪರದೇಶಗಳಲ್ಲಿ ಇವರಿಂದ ಹಿಂದು ಧರ್ಮ ಪ್ರಸಾರವಾಗಿಯೇ ತೀರುವದೆಂದು ಅವರ ಧೃಢ ವಿಶ್ವಾಸ. ಇನ್ನುಳಿದುದೆಂದರೆ ಖರ್ಚು ವೆಚ್ಚಗಳ ಪ್ರಶ್ನೆ. ಸ್ವಾಮಿಗಳ ಶಿಷ್ಯರೂ ಅಭಿಮಾನಿಗಳೂ ತಮ್ಮ ಶಕ್ತಿ ಮೀರಿ ಹಣವನ್ನು

ವನ್ನು ಕೂಡಿಸಿದರು. ಅದರಂತೆ ಖೇತ್ರಿ, ಜಯಪುರ ಸಂಸ್ಥಾನಿಕರೂ ತಮ್ಮ ಭಕ್ತಿಯನ್ನು ಸಲ್ಲಿಸಿದರು.

ಇದೇ ಹೊತ್ತಿಗೆ ಅಮೇರಿಕೆಯ ಚಿಕಾಗೋ ಪಟ್ಟಣದಲ್ಲಿ ಜಾಗತಿಕ ಸರ್ವಧರ್ಮ ಪರಿಷತ್ತು ಕೂಡುವದಿತ್ತು. ಅಲ್ಲಿ ಸ್ವಾಮಿಗಳ ಉಪನ್ಯಾಸವಾಗಬೇಕೆಂದು ಎಲ್ಲರ ಇಚ್ಛೆ. ಅದರಿಂದ ಸಾಧ್ಯವಿದ್ದಷ್ಟು ಬೇಗನೆ ಅಲ್ಲಿಗೆ ಪ್ರಯಾಣ ಬೆಳಿಸಬೇಕೆಂದು ನಿರ್ಣಯವಾಯಿತು. ವಿವೇಕಾನಂದ ಸ್ವಾಮಿಗಳು ಮತ್ತೆ ಮಾತಾಜಿಯ ಹರಕೆಯನ್ನು ಪಡೆದರು. ೧೮೯೩ನೆಯ ಮೇ ૩೧ನೆಯ ದಿನಾಂಕ ಹಡಗವನ್ನು ಹತ್ತಿದರು. ಆ ಪರ್ಯಟನದಲ್ಲಿ ಅವರಿಗೆ ವರ್ಣದ್ವೇಷದ ಕೆಲವು ಕಟು ಅನುಭವಗಳು ಬಂದುವು. ಬಿಳಿಯರು ಕರಿಯ ಜನರನ್ನು ಹೀನ ದೃಷ್ಟಿಯಿಂದ ನೋಡುತ್ತಿದ್ದರು. ಆದರೆ ಸ್ವಾಮಿಗಳು ಉಪಾಯದಿಂದ ಎಲ್ಲ ಕಷ್ಟಗಳನ್ನು ಕಡೆಹಾಯ್ದರು; ಒಮ್ಮೆ ಜೀವಂತವಾಗಿ ಚಿಕಾಗೋ ಪಟ್ಟಣವನ್ನು ಮುಟ್ಟಿದರು.

ಅಮೇರಿಕೆಯಲ್ಲಿ ಇವರಿಗೆ ಯಾರೂ ಪರಿಚಿತರಿರಲಿಲ್ಲ. ಅಲ್ಲದೆ ಅಲ್ಲಿ ಗುರುತಿಗಾಗಿ ತೆಗೆದುಕೊಂಡ ಪತ್ರಗಳು ಎಲ್ಲಿಯೋ ಕಳೆದುಹೋಗಿದ್ದುವು. ಅದರಿಂದ ಒಂದು ಹಾಟೇಲಿನಲ್ಲಿ ಉಳಿದುಕೊಂಡರು; ಮೂರು ನಾಲ್ಕು ದಿವಸಗಳನ್ನು ಕಳೆದರು; ಆ ಮೇಲೆ ತಾವು ಹೊರಟ ಕಾರ್ಯದ ಕಡೆಗೆ ಲಕ್ಷವನ್ನು ಹಾಕಿದರು.

ಚಿಕಾಗೋ ಸರ್ವಧರ್ಮ ಪರಿಷತ್ತಿಗೆ ವಿಶ್ವವಿಖ್ಯಾತ್ ಧರ್ಮಗುರುಗಳನ್ನೇ ಉಪನ್ಯಾಸಕ್ಕೆ ಕರೆಸಿದ್ದರು. ಆಮಂತ್ರಿತರಿಗಷ್ಟೇ ಅಲ್ಲಿ ಮಾತಾಡಲು ಒಪ್ಪಿಗೆಯಿತ್ತು. ಬೇರೆಯವರು ಅಲ್ಲಿ ಪ್ರೇಕ್ಷಕರಂತೆ ಪ್ರವೇಶವನ್ನು ಪಡೆಯುವದೂ ಕಠಿಣವಾಗಿತ್ತು. ವಿವೇಕಾನಂದ ಸ್ವಾಮಿಗಳಿಗೆ ಆಮಂತ್ರಣವೇ ಇರಲಿಲ್ಲ. ಪ್ರೇಕ್ಷಕರಾಗಿ ಒಳಸೇರಬೇಕೆಂಡರೂ ಇವರನ್ನು ಯಾರೂ ಅಲ್ಲಿ ಹಚ್ಚಿಕೊಳ್ಳಲಿಲ್ಲ. ಸ್ವಾಮಿ

ಗಳಿಗೆ ತುಸು ನಿರಾಶೆಯಾಯಿತು; ವ್ಯರ್ಥವಾಗಿ ಹಣವನ್ನು ಹಾಳು ಮಾಡಿಕೊಂಡು ಬಂದೆನಲ್ಲ; ಎಂದು ಕೆಡುಕೂ ಎನಿಸಿತು. ಆದರೂ ಗುರುದೇವನ ಹೆಸರನ್ನು ತೆಗೆದುಕೊಂಡು ಮತ್ತೆ ಪ್ರಯತ್ನ ನಡೆಸಿದರು.

ಸ್ವಾಮಿಗಳು ಚಿಕಾಗೋದಿಂದ ಬೋಸ್ಟನಕ್ಕೆ ಉಗಿಬಂಡಿಯಲ್ಲಿ ಹೊರಟರು. ಆಗಿನ ಅವರ ವೇಷವೆಂದರೆ ಒಂದು ಕಫನಿ, ಪಾಯಜಮಾ, ತಲೆಗೆ ಕೇಶರಿ ಬಣ್ಣದ ಪಟಕಾ. ಗಾಡಿಯಲ್ಲಿ ಕುಳಿತ ಬಿಳಿ ಬಣ್ಣದ ಜಂಭದ ಕೋಳಿಗಳಿಗೆ ಇದೊಂದು ವಿಚಿತ್ರ ವೇಷವೇ ಎನಿಸಿತು, ವಿನೋದ ಪ್ರಸಂಗವೂ ಆಯಿತು. ಅದೇ ಕಿಡಿಗೇಡಿತನದಿಂದಲೇ ಅಮೇರಿಕನ್ ಮಹಿಳೆಯೊಬ್ಬಳು ಸ್ವಾಮೀಜಿಯವರನ್ನು ಕೆಣಕಿದಳು; ಏನೇನೋ ಪ್ರಶ್ನಗಳನ್ನು ಕೇಳಿದಳು. ಸ್ವಾಮಿಗಳವರು ಅವುಗಳಿಗೆಲ್ಲ ಒಳ್ಳೇ ವಿದ್ವತ್ತಾ ಪ್ರಚುರವಾದ ಉತ್ತರಗಳನ್ನು ಕೊಟ್ಟರು. ಆಕೆಯೂ ಒಬ್ಬ ವಿದುಷಿ. ಸ್ವಾಮಿಗಳ ಈ ಪಾಂಡಿತ್ಯ, ಮಾತಿನ ಮೋಹಕತನ, ಆಂಗ್ಲ ಭಾಷಾ ಪ್ರಭುತ್ವಗಳ ಬಗೆಗೆ ಆಕೆಯು ಅಚ್ಚರಿಗೊಂಡಳು. ಆಕೆಯ ಮಂಗತನವೆಲ್ಲ ಮಾಯವಾಯಿತು. ವಿನಯದಿಂದ ಸ್ವಾಮಿಯವರನ್ನು ಒಪ್ಪಿಸಿ ಬೋಸ್ಟನದಲ್ಲಿ ತನ್ನ ಮನೆಗೆ ಅವರನ್ನು ಕರೆದೊಯ್ದಳು.

ಅಲ್ಲಿಗೆ ಹೋದ ಮೇಲೆ ಆ ವಿದುಷಿ ಈ ವಿಚಿತ್ರ ವೇಷದ ಭಾರತೀಯ ಸನ್ಯಾಸಿಯ ಬುದ್ಧಿವಂತಿಕೆಯ ಬಗೆಗೆ ತನ್ನ ಆಪ್ತೇಷ್ಟರಿಗೆ, ಮಿತ್ರರಿಗೆ ಪತ್ರಗಳನ್ನು ಬರೆದಳು. ಅವರೆಲ್ಲರೂ ಸ್ವಾಮಿಗಳನ್ನು ನೋಡಲು ಧಾವಿಸಿ ಬಂದರು. ಅವರು ಸ್ವಾಮಿಗಳಿಗೆ ಹಲವಾರು ವಿಷಯಗಳ ಬಗೆಗೆ ಪ್ರಶ್ನಗಳನ್ನು ಕೇಳುತ್ತಿದ್ದರು, ಸ್ವಾಮೀಜಿ ಅವುಗಳಿಗೆಲ್ಲ ಮಾರ್ಮಿಕವಾದ ಉತ್ತರಗಳನ್ನು ಕೊಡುತ್ತಿದ್ದರು. ಈ ಉತ್ತರಗಳಿಂದ ಎಲ್ಲರೂ ಮಂತ್ರ ಮುಗ್ಧರಂತೆ ಆದರು. ಈ

ವಾರ್ತೆ ತಡವಿಲ್ಲದೆ ಎಲ್ಲಕಡೆಗೂ ಹಬ್ಬಿತು. ಜನರು ತಂಡ ತಂಡ ವಾಗಿ ಸನ್ಯಾಸಿಯ ದರ್ಶನಕ್ಕೆ ಬರಹತ್ತಿದರು. ಕಸ್ತೂರಿ ಎಲ್ಲಿದ ರೇನು ? ಅದರ ಪರಿಮಳದ ಪ್ರಸಾರಕ್ಕೆ ಅಡೆತಡೆಯೆಲ್ಲಿ ?

ಈ ಸಂದರ್ಶಕರ ಗುಂಪಿನಲ್ಲಿ ಮಿ. ಎ. ಎಸ್. ರಾಯಿಟ ಎಂಬ ವಿದ್ವಾಂಸರಿದ್ದರು. ಅವರು ಹಾವರ್ಡ ವಿಶ್ವ ವಿದ್ಯಾಲಯ ದಲ್ಲಿ ಗ್ರೀಕ ಭಾಷಾ ಪ್ರಾಧ್ಯಾಪಕರು. ಅವರು ಭಾರತೀಯ ಮತ್ತು ಪಾಶ್ಚಾತ್ಯ ಧರ್ಮತತ್ವಗಳ ಬಗಗೆ ಸ್ವಾಮಿಗಳಿಗೆ ಕೆಲವು ಪ್ರಶ್ನಗಳನ್ನು ಕೇಳಿದರು. ಸ್ವಾಮಿಗಳು ಸರ್ವಧರ್ಮ ಸಮನ್ವಯ ಮಾಡುತ್ತ ಹಿಂದುಧರ್ಮದ ಶ್ರೇಷ್ಠತೆಯನ್ನು ಅವರಿಗೆ ಮನ ಗಾಣಿಸಿಕೊಟ್ಟರು. ಆ ಪ್ರಾಧ್ಯಾಪಕರಿಗೆ ಪರಮಾನಂದವಾಯಿತು. ಒಂದು ರೀತಿಯಿಂದ ಅವರು ಸ್ವಾಮಿಗಳ ಶಿಷ್ಯರೇ ಆದಂತಾದರು; ಮತ್ತು ಅವರ ಪ್ರಯಾಣದ ಉದ್ದೇಶವನ್ನು ಕೇಳಿದರು.

ಸ್ವಾಮಿ ವಿವೇಕಾನಂದರು ಭಾರತದಿಂದ 'ಚಿಕಾಗೋ ಪರಿ ಷತ್ತಿನ ಸಲುವಾಗಿ ಹೊರಟ ಉದ್ದೇಶವನ್ನೂ ಈ ವರೆಗೆ ತಮ್ಮ ಪ್ರಯತ್ನಗಳೆಲ್ಲ ವಿಫಲವಾದುದನ್ನೂ ಮುಚ್ಚು ಮರೆಯಿಲ್ಲದೆ ತಿಳಿಸಿ ದರು; ಮತ್ತು ಆ ಪರಿಷತ್ತಿನಲ್ಲಿ ತಮ್ಮದೊಂದು ಉಪನ್ಯಾಸಕ್ಕೆ ಏರ್ಪಾಡು ಮಾಡಬೇಕೆಂದು ಕೇಳಿಕೊಂಡರು. ಮಿ. ರಾಯಿಟ್ ಸಾಹೇಬರು ಆ ಬಗೆಗೆ ಅತ್ಯಾನಂದದಿಂದ ಒಪ್ಪಿದರು; ಇಷ್ಟೇಅಲ್ಲ, ಪ್ರವೇಶವನ್ನು ಕೊಡಿಸುವದಾಗಿ ವಚನವನ್ನು ಕೊಟ್ಟರು. ಏಕೆಂದರೆ ಆ ಪರಿಷತ್ತಿನ ವಿಷಯ ನಿಯಾಮಕ ಸಮಿತಿಯ ಅಧ್ಯಕ್ಷ ಡಾಕ್ಟರ ಬ್ಯಾರೋಜ ಅವರು ಇವರ ಪರಮ ಸ್ನೇಹಿತರು. ಮಿ. ರಾಯಿಟ ಅವರ ಪರಿಚಯ ಪತ್ರವನ್ನು ತೆಗೆದುಕೊಂಡರು. ಸ್ವಾಮಿಜಿ ಚಿಕಾ ಗೋಕ್ಕೆ ಹೊರಟರು. ಆದರೆ ಅಲ್ಲಿ ಬ್ಯಾರೋಜ ಸಾಹೇಬರ ಮನೆ ಯನ್ನು ತೋರಿಸುವ ಸಹೃದಯರು ಅಲ್ಲಿ ಸಿಕ್ಕಲಿಲ್ಲ, ಯಾರನ್ನು

ಕೇಳಿದರೂ ಅವರು ಈ ವಿಚಿತ್ರ ವೇಷದ ಸನ್ಯಾಸಿಗೆ ಅಡ್ಡ ದಾರಿ ತೋರಿಸುವ ಕಿಡಿಗೇಡಿಗಳೇ. ಕಡೆಗೆ ಸ್ವಾಮಿಗಳು ತಿರುಗಾಡಿ ದಣಿದರು. ಒಂದು ಬಂಗಲೆಯ ಛಾವಣಿಯಲ್ಲಿ ಒರಗಿದರು.

ಮನೆಯೊಡತಿ ಶ್ರೀಮತಿ ಹೆಲೆನ್ ಈ ವಿಚಿತ್ರ ಸನ್ಯಾಸಿಯನ್ನು ನೋಡಿದಳು. ಸ್ವಾಮಿಗಳ ಮುಖದ ಮೇಲಿನ ದೈವಿಕ ಕಳೆ ಆ ಹೆಣ್ಣುಮಗಳ ಹೃದಯದಲ್ಲಿ ಗೌರವ ಭಾವವನ್ನು ಹುಟ್ಟಿಸಿತು. ಆಕೆಯೂ ಒಬ್ಬ ವಿದುಷಿ. ಕೂಡಲೆ ಹೊರಗೆ ಬಂದಳು; ಸ್ವಾಮಿಯವರನ್ನು ಮನ್ನಣೆಯಿಂದ ಒಳಗೆ ಕರೆದೊಯ್ದಳು. ಬಳಿಕ ಭಾರತೀಯ ಆತ್ಮಜ್ಞಾನ, ಸರ್ವ ಧರ್ಮ ಸಮನ್ವಯಗಳ ಬಗೆಗೆ ಅವರಿವರ ನಡುವೆ ಮಾತುಕತೆ ನಡೆದುವು. ಸ್ವಾಮಿಯವರ ಬ್ರಹ್ಮ ತೇಜಸ್ಸು, ಬೃಹಸ್ಪತಿಯ ವರ್ಚಸ್ಸು ಎರಡೂ ಅವಳನ್ನು ಮಂಕುಗೊಳಿಸಿದುವು. ಆಕೆ ಡಾ. ಬ್ರ್ಯೂರೋಜ ಅವರಿಗೆ ಆಪ್ತ ಸ್ನೇಹಿತಳು. ಆಕೆ ತಡವಿಲ್ಲದೆ ಸ್ವಾಮಿಗಳನ್ನು ಅವರ ಹತ್ತಿರ ಕರೆದೊಯ್ದಳು; ಅವರಿಬ್ಬರ ಪರಿಚಯ ಮಾಡಿಕೊಟ್ಟಳು.

ತುಸುವೇ ಅವಧಿಯಲ್ಲಿ ಡಾ. ಬ್ರ್ಯೂರೋಜರು ಸ್ವಾಮಿಗಳ ಯೋಗ್ಯತೆಯನ್ನು ಕಂಡುಕೊಂಡರು; ಸರ್ವ ಧರ್ಮ ಪರಿಷತ್ತಿನಲ್ಲಿ ಅತ್ಯವಶ್ಯವಾಗಿ ಉಪನ್ಯಾಸಕ್ಕೆ ಅವಕಾಶ ಕೊಡುವುದಾಗಿ ವಾಗ್ದಾನ ಮಾಡಿದರು.

ಸ್ವಾಮಿಗಳಿಗೆ ಈಗ ಹೃದಯ ಹಗುರಾಯಿತು. ಶ್ರೀಮತಿ ಹೆಲೆನ್ ಅವರ ಅತಿಥಿಗಳಾಗಿ ಅವರ ವಾಸಕ್ಕೆ ತೆರಳಿದರು.

## ೮. ಭಾಷಣದ ಭವ್ಯತೆ.

೧೧ನೆಯ ದಿನಾಂಕಕ್ಕೆ ಚಿಕಾಗೋದಲ್ಲಿ ಸರ್ವಧರ್ಮ ಪರಿಷತ್ತು ಸೇರಿತು. ಸಭೆಯಲ್ಲಿ ನಾನಾದೇಶದ ವಿದ್ವಾಂಸ ವಿದುಷಿಯರಿಂದ ತುಂಬಿತ್ತು. ಘನ ವಿದ್ವಾಂಸರಾದ ಉಪನ್ಯಾಸಕರು ವೇದಿಕೆಯ ಮೇಲೆ ಕುಳಿತಿದ್ದರು. ಕಾರ್ಡಿನಲ್ ಗಿಬನ್ಸರು ಅಧ್ಯಕ್ಷ ಪೀಠವನ್ನು ಅಲಂಕರಿಸಿದ್ದರು. ಅವರ ಎಡಬಲಗಳಲ್ಲಿ ಸರ್ವಧರ್ಮ ಪ್ರತಿನಿಧಿಗಳು ಕುಳಿತಿದ್ದರು. ಸ್ವಾಮಿ ವಿವೇಕಾನಂದರೂ ಅವರಲ್ಲಿಯೇ ಒಬ್ಬರು.

ಆ ಧರ್ಮ ಪ್ರತಿನಿಧಿಗಳೆಲ್ಲ ಸಾಮಾನ್ಯವಾಗಿ ಪಾಶ್ಚಾತ್ಯ ಉಡು ತೊಡುಗೆಗಳಲ್ಲಿಯೇ ಇದ್ದರು. ಆದರೆ ವಿವೇಕಾನಂದ ಸ್ವಾಮಿಗಳು ಕೆಂಪು ಬಣ್ಣದ ರೇಶಿಮೆಯ ಕಫನಿಯನ್ನು ತೊಟ್ಟಿದ್ದರು; ಸೊಂಟ ಕ್ಕೊಂದು ರೇಶಿಮೆಯ ವಸ್ತ್ರವನ್ನು ಕಟ್ಟಿಕೊಂಡಿದ್ದರು; ಒಳಗೆ ಚೊಣ್ಣ; ತಲೆಯ ಮೇಲೆ ಕೇಸರಿ ಬಣ್ಣದ ರೇಶಿಮೆಯ ಪಟಕಾ.

ಮೊದಲೇ ತಿದ್ದಿತೀಡಿ ಮಾಡಿದಂತಹ ಗುಂಡನೆಯ ಮುಖ, ಹೊಳೆಹೊಳೆವ ಕಣ್ಣುಗಳು, ಮುಖದ ಮೇಲೆ ಬ್ರಹ್ಮತೇಜಸ್ಸು, ಮೇಲೆ ಈ ಅಲಂಕಾರವಾದ ಉಡುಗೆ; ಎಲ್ಲರೂ ಒಂದಿಲ್ಲೊಂದು ಭಾವನೆಯಿಂದ ಸ್ವಾಮಿಯವರನ್ನೇ ದಿಟ್ಟಿಸಿ ನೋಡುತ್ತಿದ್ದರು.

ಸಭಾಕಾರ್ಯ ಪ್ರಾರಂಭವಾಯಿತು. ಎಲ್ಲ ಧರ್ಮ ಪ್ರತಿನಿಧಿ ಗಳೂ ಒಂದೊಂದು ಪ್ರಾರ್ಥನಾ ಪದ್ಯವನ್ನು ಹೇಳಿದರು. ಸ್ವಾಮಿ ಗಳ ಧ್ವನಿ ಮಾಧುರ್ಯ ... ಮನಸ್ಸನ್ನು ಸೆಳೆಯಿತು. ಆ ವೇಳೆ ಒಬ್ಬೊಬ್ಬರೇ ಪ್ರತಿನಿಧಿಗಳು ತಮ್ಮ ತಮ್ಮ ಭಾಷಣಗಳನ್ನು ಓದಲು ಆರಂಭಿಸಿದರು. ಅವರೆಲ್ಲರ ಭಾಷಣಗಳೂ ಅಚ್ಚಾಗಿ ದ್ದುವು. ಅವುಗಳಲ್ಲಿ 'ನಮ್ಮ ಧರ್ಮವೊಂದೇ ಶ್ರೇಷ್ಠ' ... ಮಾತೇ

ಒಡೆದು ಕಾಣಿಸುತ್ತಿದ್ದಿತು. ಅದು ಏಕೆ, ಎಂಬ ಪ್ರಶ್ನೆಗೆ ಸಮಾಧಾನಕರ ಉತ್ತರವೇ ಇರಲಿಲ್ಲ; ಮತ್ತು ಸರ್ವ ಧರ್ಮಗಳನ್ನು ತೂಗಿ ನೋಡುವ ಸಾಹಸವನ್ನು ಯಾರೂ ಮಾಡಲಿಲ್ಲ.

ಕೊನೆಗೆ, ವಿವೇಕಾನಂದ ಸ್ವಾಮಿಗಳ ಸರತಿ ಬಂದಿತು. ಅವರು ಗಂಭೀರವಾಗಿ ಹೆಜ್ಜೆಗಳನ್ನು ಇಡುತ್ತ ವ್ಯಾಸಪೀಠದ ನಡುವೆ ಬಂದರು, ಒಮ್ಮೆ ಸಭಿಕರನ್ನು ಸುತ್ತಲೂ ನೋಡಿದರು. ಸಭೆಯಲ್ಲಿ ಒಮ್ಮೆಲೆ ಜಾದೂ ಕಡ್ಡಿಯನ್ನು ತಿರುವಿದಂತಾಯಿತು. ಎಲ್ಲರೂ ಮೈತುಂಬ ಕಣ್ಣು ಕಿವಿ ಮಾಡಿಕೊಂಡು ಅತ್ತಲೇ ನೋಡ ತೊಡಗಿದರು.

ಸ್ವಾಮಿಗಳು ತುಸು ಹೊತ್ತು ಕಣ್ಣುಮುಚ್ಚಿ ಗುರುದೇವನನ್ನು ಧ್ಯಾನಿಸಿದರು. ಆ ಮೇಲೆ, ಅಮೇರಿಕನ್ ಬಂಧುಗಳೇ ಭಗಿನಿಯರೇ....ಎಂದಿಷ್ಟೇ ನುಡಿದರು. ಒಮ್ಮಿಂದೊಮ್ಮೆಲೆ ಹರ್ಷೋದ್ಗಾರ, ಚಪ್ಪಾಳೆಗಳ ಕಡಕಡಾಟಗಳು ಐಯ್ದು ನಿಮಿಷಗಳವರೆಗೆ ಎಡೆಬಿಡದೆ ನಡೆದುವು. ಆ ಆಳ್ವನದಲ್ಲಿ ಅಷ್ಟೊಂದು ಆಕರ್ಷಕತೆ ಇತ್ತು; ಆ ಶಬ್ದಗಳಲ್ಲಿ ಅಷ್ಟೊಂದು ಆತ್ಮೀಯತೆ ತುಂಬಿತ್ತು. ಆ ಧ್ವನಿಯಲ್ಲ ಅಷ್ಟೊಂದು ಸವಿಜೇನು ಸೂಸುತ್ತಿತ್ತು. ಮುಂದೆ ಸ್ವಲ್ಪೇ ಅವಧಿಯಲ್ಲಿ ಸ್ವಾಮಿಜಿ ಸರ್ವಧರ್ಮಗಳ ಸತ್ಯತತ್ತ್ವಗಳ ಸಮನ್ವಯ ಮಾಡಿದರು. ಅವುಗಳಲ್ಲಿ ಹಿಂದೂ ಧರ್ಮ ತತ್ತ್ವಗಳು ರತ್ನದಂತೆ ಅಮೂಲ್ಯವಾಗಿವೆಯೆಂದೂ ಆಚರಣೆಗೆ ಎಲ್ಲವುಗಳಿಗಿಂತ ಹಗುರಾಗಿವೆಯೆಂದೂ ತೋರಿಸಿಕೊಟ್ಟರು.

ಸ್ವಾಮಿಗಳವರ ಭಾಷಣ ನಡೆಯುವಾಗೆಲ್ಲ ನಡು ನಡುವೆ ಹರ್ಷೋದ್ಗಾರಗಳ ಸುರಿಮಳೆ ಮಾಡುತ್ತಿದ್ದರು ಶ್ರೋತೃಗಳು. ಮಾತು ಮುಗಿದ ಮೇಲೆ ಮತ್ತೆ ಪ್ರಚಂಡ ಕರತಾಡನ ಮಾಡಿದರು. ಯಾರೊಬ್ಬರ ಬಾಯಲ್ಲಿಯೂ ಸ್ವಾಮಿಗಳ ಹೊಗಳಿಕೆಯೇ ಹೊಗ

ಳಿಕೆ! ಇಷ್ಟೇ ಅಲ್ಲ, ಕರಿಯರನ್ನು ಮನುಷ್ಯರೆಲ್ಲವೆಂದು ಟೀಕಿಸು ತ್ತಿದ್ದ ಪತ್ರಿಗಳು ಕೂಡ ಸ್ವಾಮಿಜಿಯವರನ್ನು ಮನವಾರೆ ಹೊಗಳಿ ದುವು. ಆ ಪರಿಷತ್ತು ಮುಗಿಯುವುದರೊಳಗೆ ವಿವೇಕಾನಂದ ಸ್ವಾಮಿಗಳು ಅಮೇರಿಕನರಿಗೆ ಒಬ್ಬ ಅವತಾರ ಪುರುಷರಂತೆ ಕಾಣ ತೊಡಗಿದರು. ಈ ಬಗೆಗೆ ಬೋಸ್ಟನ್ ಈವ್ನಿಂಗ್ ಟ್ರಾನ್ಸ್ ಸ್ಕ್ರಿಪ್ಟ ಪತ್ರಿಕೆ ಬರೆದಿರುವುದೇನೆಂದರೆ— ಪರಿಷತ್ತಿನ ಕಾರ್ಯ ಕಲಾ ಪಗಳಲ್ಲಿ ಶ್ರೋತೃಗಳಿಗೆ ಬೇಸರವುಂಟಾದರೆ, ಅಥವಾ ಭಾಷಣಗಳು ನಡೆದಾಗ ಬೇಸರವಾಗಿ ಜನರು ಏಳತೊಡಗಿದರೆ, ಕೂಡಲೆ ಅಧ್ಯ ಕ್ಷರು ಎದ್ದು ನಿಂತು— ಕೊನೆಯದಾಗಿ ಸ್ವಾಮಿ ವಿವೇಕಾನಂದರ ಭಾಷಣವನ್ನು ಏರ್ಪಡಿಸಿದೆ—ಎಂದು ಹೇಳುತ್ತಿದ್ದರು. ಕೂಡಲೆ ಬೇಸರಗೊಂಡ ಜನರಲ್ಲಿ ಹೊಸ ಹುರುಪು ಮೂಡುತ್ತಿತ್ತು. ಅವರು ಸದ್ದಿಲ್ಲದಂತೆ ಸಭೆಯಲ್ಲಿ ಕುಳ್ಳಿರುತ್ತಿದ್ದರು. ಏಕಾಕಿಯಾಗಿ ಅಮೇ ರಿಕೆಯಂತಹ ದೂರ ದೇಶಕ್ಕೆ ಹೋಗಿ, ವರ್ಣದ್ವೇಷದ ಜ್ವಲತ್ ಜ್ವಾಲೆಗೆ ಇದಿರಾಗಿನಿಂತು, ಆತ್ಮ ತೇಜಸ್ಸಿನಿಂದ ಎಲ್ಲರ ಕಣ್ಣನ್ನೂ ಕುಕ್ಕಿಸಿ, ಹಿಂದುಧರ್ಮದ ಹಿರಿಮೆಯನ್ನು ಜಗತ್ತಿಗೇ ಪರಿಚಯ ಮಾಡಿಕೊಟ್ಟ ವಿವೇಕಾನಂದ ಸ್ವಾಮಿಗಳ ಯೋಗ್ಯತೆಯನ್ನು ಎಷ್ಟೆಂದು ಬಣ್ಣಿಸಬೇಕು!

ವಿಶ್ವಧರ್ಮ ಪರಿಷತ್ತು ಮುಗಿದ ಮೇಲೆ ಮತ್ತೆ ಹದಿನೈದು ದಿವಸಗಳ ವರೆಗೆ ಸ್ವಾಮಿಗಳವರ ಉಪನ್ಯಾಸಗಳು ಅನೇಕ ಕಡೆ ನಡೆದುವು. ದಿನದಿನಕ್ಕೆ ಜನಸಮ್ಮರ್ದ ಹೆಚ್ಚಾಗಿಯೇ ಕೂಡುತ್ತಿತ್ತು. ವರ್ತಮಾನ ಪತ್ರಗಳಂತೂ ಅವರನ್ನು ಮನಸೋಕ್ತ ಹೊಗಳಹತ್ತಿ ದುವು. ಯಾವ ಪತ್ರದಲ್ಲಿಯೂ ಸ್ವಾಮಿಗಳ ಸ್ತುತಿಯೇ ಸ್ತುತಿ! ಇದರಿಂದ ಅಮೇರಿಕೆಯ ಮೂಲೆ ಮೂಲೆಗೂ ಅವರ ಕೀರ್ತಿ ಹಬ್ಬಿತು; ಎಲ್ಲರೂ ಅವರನ್ನು ನೋಡಲು ಬಯಸಹತ್ತಿದರು.

ಈ ಹೊತ್ತಿಗೆ ಸ್ವಾಮಿಯವರ ಹಣದ ಹಮ್ಮಿಣಿ ಮಾತ್ರ ಪೂರಾ ತೆರವಾಗುತ್ತ ಬಂದಿತ್ತು. ಹೊಗಳಿಕೆಯಾಯಿತು, ಹೆಗ್ಗಳಿಕೆಯಾಯಿತು; ಹೊಟ್ಟೆಯ ಗತಿಯೇನು? ಆದರೆ ಅವರಿಗೆ ಭಗವದ್ಗೀತೆಯ ಮೇಲೆ ತುಂಬಾ ವಿಶ್ವಾಸ. "ಅನನ್ಯಾಶ್ಚಿತಂಯಂತೋ ಮಾಂ ಯೇಜನಾಃ ಪರ್ಯುಪಾಸತೇ ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ" ಎಂಬ ವಾಕ್ಯದ ಮೇಲೆ ಅವರಿಗೆ ತುಂಬಾ ವಿಶ್ವಾಸ. ಅದರಿಂದ ತಮ್ಮ ಹೊರೆಯನ್ನು ದೇವರ ಮೇಲೆ ಹಾಕಿದರು; ಆತನ ಸಂದೇಶವನ್ನು ಸಾರುವ ಕೆಲಸವನ್ನು ಎಡೆಬಿಡದೆ ನಡೆಸಿದರು. ಎಂದಮೇಲೆ, ದೇವನೇ ಭಕ್ತನ ಬೆಂಬಲಕ್ಕೆ ಬರಬೇಕಾಯಿತಲ್ಲವೇ?

ಸ್ವಾಮಿಗಳವರ ಉಪನ್ಯಾಸದ ಬಗೆಗೆ ಎಲ್ಲೆಲ್ಲಿಯೂ ಕುತೂಹಲವುಂಟಾಯಿತು. ಆಗ ಕೆಲವು ಸಿರಿವಂತರು ದುಡ್ಡುಕೊಟ್ಟು ಸ್ವಾಮಿಯವರ ಉಪನ್ಯಾಸಗಳನ್ನು ಏರ್ಪಡಿಸಿದರು. ಆ ಸಿರಿವಂತರಿಗೆ ತಿಕೀಟು ಮಾರಾಟದಿಂದ ಎಣಿಕೆ ಮೀರಿ ಲಾಭವಾಯಿತು. ಎಂತಹ ದೊಡ್ಡ ಥಿಯೇಟರ ಇದ್ದರೂ ತಡವಿಲ್ಲದೆ ತುಂಬಿ ಹೋಗುತ್ತಿತ್ತು. ಈ ತರದ ಏರ್ಪಾಡುಗಳಿಂದ ಸ್ವಾಮಿಗಳ ಉಪಜೀವನದ ಚಿಂತೆ ದೂರವಾಯಿತು; ಇಷ್ಟೇ ಅಲ್ಲ ಹಣದ ಹಮ್ಮಿಣಿಯೂ ಉಬ್ಬಿತು.



## ೯. ಧರ್ಮ ಧ್ವಜಾರೋಪಣ.

ಸ್ವಾಮಿಗಳು ಈಗ ಹೊಸದೊಂದು ಧರ್ಮಸಂಕಟದಲ್ಲಿ ಸಿಕ್ಕಿಕೊಂಡರು. ಹಣ, ಹಣ, ಹಣ! ಅಂತಹರಿಗೆ ಬದುಕಾವು ದಕ್ಕೆ ಮಾತ್ರವೇ ಅದರ ಅವಶ್ಯಕತೆ. ಐಷ ಆರಾಮಿಗಾಗಲಿ ಮುಡದಿ ಮಕ್ಕಳಿಗಾಗಲಿ ಅವರು ಅದನ್ನು ಬೇಡತಕ್ಕವರಲ್ಲ. ಅಲ್ಲದೆ, ಇವರ ಉಪನ್ಯಾಸಗಳೆಂದರೆ ಸಿರಿವಂತರಿಗೆ ಲಾಭದ ಸಾಧನಗಳಾ ದುವು. ಅದಕ್ಕಾಗಿ ಪ್ರತಿಫಲ ಹಣದ ಏರಾಟ, ಮೇಲಾಟ ನಡೆ ದುವು. ಒಟ್ಟಾರೆ, ಸ್ವಾಮಿಗಳು ಧನಕ್ಕಾಗಿ ಅಧ್ಯಾತ್ಮ ವಿದ್ಯೆಯನ್ನು ಮಾರಾಟಕ್ಕೆ ಇಟ್ಟಂತಾಯಿತು. ಎಂದಮೇಲೆ ಆ ನಿಸ್ಪೃಹ ಸ್ವಾಮಿ ಗಳು ಧರ್ಮ ಸಂಕಟದಲ್ಲಿ ಸಿಕ್ಕಿಕೊಂಡಂತಾಗಲಿಲ್ಲವೇ ? ಹಣವೇನೋ ಬೇಕು; ಆದರೆ, ಅದಕ್ಕೆ ಈ ವ್ಯಾಪಾರದ ಮಾರ್ಗ ಅವರಿಗೆ ತಕ್ಕ ದಾಗಿ ತೋರಲಿಲ್ಲ. ಮುಂದೇನು? ಅದಕ್ಕೆ ದೇವರೇ ಹೊಣಗಾರ ನಲ್ಲವೇ?

ಅಮೇರಿಕೆಯ ಉಪನ್ಯಾಸಗಳು ಎಲ್ಲರ ಮೇಲೆಯೂ ಒಳ್ಳೆ ಪರಿಣಾಮ ಮಾಡಿದ್ದುವು. ಹೆಣ್ಣುಮಕ್ಕಳಂತೂ ಆ ಮಾತುಗಾರಿ ಕೆಗೆ ಮುಗ್ಧರಾಗಿಬಿಟ್ಟಿದ್ದರು. ಸ್ವಾಮಿಗಳ ಚೆಲುವಿಕೆಯೂ ಆಕ ರ್ಷಕವಾಗಿಯೇ ಇದ್ದಿತು. ಅದರಿಂದ ಕೆಲವರು ಸಿರಿವಂತ ಕುಮಾ ರಿಕೆಯರು ಅವರನ್ನು ಮದುವೆಯಾಗಲು ಮುಂದೆ ಬಂವರು. ಆದರೆ ವಿಶ್ವಸಂಸಾರಿಗಳಾದ ಸ್ವಾಮಿಗಳು ಈ ಸಂಕುಚಿತ ಸಂಸಾ ರಕ್ಕೆ ಮನಸ್ಸು ಮಾಡಲಿಲ್ಲ.–' ಸ್ತ್ರೀಯರೆಲ್ಲರೂ ನನಗೆ ತಾಯಿಯ ಸಮಾನರು ಎಂದು ಅವರಿಗೆ ಸ್ಪಷ್ಟವಾಗಿ ಹೇಳಿದರು. ಅವರ ಬ್ರಹ್ಮಚರ್ಯ ಬರಿಯ ಮಾತಿನಲ್ಲಿಯೇ ಇರಲಿಲ್ಲ; ಶೀಲಶುದ್ಧ ಪವಿತ್ರ ಆಚರಣೆಯಲ್ಲಿಯೂ ಮನೆಮಾಡಿಕೊಂಡಿತ್ತು. ಅದರಿಂದ ಅಮೇ ರಿಕೆಯ ಸಿರಿವಂತ ಮನೆತನದ–ದೊಡ್ಡ ದೊಡ್ಡ ಅಧಿಕಾರಿ ವರ್ಗದ–

ಹೆಣ್ಣುಮಕ್ಕಳು ಸ್ವಾಮಿಗಳ ಪರಿಚಯವನ್ನು–ಸಲುಗೆಯನ್ನು–ಮಾಡಿಕೊಂಡರು. ಆಗಾಗ ಅವರ ಉಪನ್ಯಾಸಗಳನ್ನು ಅವರೇ ಏರ್ಪಡಿಸುತ್ತಿದ್ದರು; ಸ್ವಾಮಿಗಳ ಯೋಗಕ್ಷೇಮದ ಚಿಂತೆಯನ್ನೂ ಅವರೇ ವಹಿಸಿಕೊಂಡಿದ್ದರು. ಹೀಗೆಯೇ ಕೆಲವು ಕಾಲ ಸಂದಿತು. ಈ ಅವಧಿಯಲ್ಲಿ ಸ್ವಾಮಿಗಳು ಇಂಗ್ಲಂಡದ ಪ್ರವಾಸವನ್ನೂ ಮುಗಿಸಿ ಬಂದರು.

ಸ್ವಾಮಿಗಳಿಗೆ ಈಗ ಉಪನ್ಯಾಸದ ಏರ್ಪಾಟ ಸಾಕಾಯಿತು. ಇಡಿಯ ಅಮೇರಿಕೆಯನ್ನೇ ತಿರುತಿರುಗಿ ಬೇಸರ ಬಂದಿತು. ಇನ್ನು ಗುರುಗಳ ಹೇಳಿಕೆಯಂತೆ ಪರದೇಶಗಳಲ್ಲಿ ಹಿಂದು ಧರ್ಮ ಧ್ವಜವನ್ನು ನಿಲ್ಲಿಸುವ ಕಾರ್ಯವನ್ನು ಕೈಕೊಳ್ಳಬೇಕಾಯಿತು. ಈಗ ಅವರ ವಾಸ್ತವ್ಯವೆಲ್ಲ ಮಿ. ಜಾರ್ಜ, ಡಬ್ಲ್ಯು. ಹೆಲಿಸ್ ಅವರಲ್ಲಿಯೇ ಆಗಿತ್ತು.

ಸ್ವಾಮಿಗಳವರು ಒಂದೊಂದಾಗಿ ಆಧ್ಯಾತ್ಮಿಕ ಅಭ್ಯಾಸದ ವರ್ಗವನ್ನು ತೆರೆದರು. ಅದಕ್ಕೆ ತಡವಿಲ್ಲದೆ ಅಮೇರಿಕನ್ ಸ್ತ್ರೀ–ಪುರುಷರು ತಂಡ ತಂಡವಾಗಿ ಸೇರಿಕೊಂಡರು. ಶಿಷ್ಯರ ಸಂಖ್ಯೆ ಹೆಚ್ಚಾಗುತ್ತಲೇ ಮತ್ತೆ ಕೆಲವು ವರ್ಗಗಳನ್ನು ತೆರೆದರು. ಇವೆಲ್ಲ ಯಶಸ್ವಿಯಾಗಿ ನಡೆದುವು. ಕೂಡಲೆ ಅಲ್ಲಲ್ಲಿ 'ರಾಮಕೃಷ್ಣ ಮಠ'ಗಳನ್ನು ಸ್ಥಾಪಿಸಿದರು, ಅಲ್ಲಿಯೇ 'ರಾಮಕೃಷ್ಣ ಆಧ್ಯಾತ್ಮಿಕ ವರ್ಗ'ಗಳು ನಡೆಯುವ ಏರ್ಪಾಡನ್ನು ಮಾಡಿದರು. ಇದಾವುದಕ್ಕೆ ಸ್ವಾಮಿಗಳಿಗೆ ಕಾಸಿನ ಖರ್ಚು ಕೂಡ ಹತ್ತಲಿಲ್ಲ. ಎಲ್ಲವನ್ನೂ ಅಮೇರಿಕೆಯ ಶಿಷ್ಯರೇ ಮಾಡಿಕೊಟ್ಟರು! ಎಂದಮೇಲೆ ಸ್ವಾಮಿಗಳ ದಿವ್ಯವಾಣಿಯ ಶಕ್ತಿ ಎಷ್ಟು ಬಲವತ್ತರವಾಗಿರಬೇಕು?

ಬರಬರುತ್ತ ಅಮೇರಿಕನ್ ಆಂಗ್ಲ ಸದ್ಗೃಹಸ್ಥರು ಸ್ವಾಮಿಗಳಿಂದ ಹಿಂದು ದೀಕ್ಷೆಯನ್ನು ತೆಗೆದುಕೊಂಡರು. ಲಿಯೋಲಿಂಡ್ಸ

ಬರ್ಗರು ಸ್ವಾಮಿ ಕೃಪಾನಂದರಾದರು; ಮೇರೀಲುಯಿಸ ಎಂಬ ವಿದುಷಿ 'ಅಭಯಾನಂದಾ' ಎಂಬ ಹೆಸರನ್ನು ಪಡೆದರು. ಇಂಗ್ಲಂಡದ ಕುಮಾರಿ ಮಾರ್ಗರೆಟರು 'ಭಗಿನೀ ನಿವೇದಿತಾ' ಎಂಬ ನಾಮವನ್ನು ಧರಿಸಿದರು. ಇದರಂತೆ ಮಿ. ಗುಡ್‌ವಿನ್ ಮತ್ತು ಕ್ಯಾಪ್ಟನ್ ಸೇವ್ಹಿಯರ್ ಅವರು ಮಕ್ಕಳು ಮರಿ ಸಹಿತವಾಗಿ ಹಿಂದು ದೀಕ್ಷೆ ಯನ್ನು ಹೊಂದಿದರು. ಇಂಗ್ಲಂಡದ ಪ್ರಸಿದ್ಧ ವಿದ್ವಾಂಸರಾದ ಪ್ರೊ. ಮ್ಯಾಕ್ಸಮುಲರರು ಆಗ ರಾಮಕೃಷ್ಣ ಪರಮಹಂಸರ ಚರಿತ್ರೆಯನ್ನು ಬರೆಯುತ್ತಿದ್ದರು. ಅವರು ಈ ಪ್ರಸಂಗದಲ್ಲಿ ಸ್ವಾಮಿಗಳಿಂದ ಬಹಳ ಸಾಹಾಯ್ಯವನ್ನು ಪಡೆದರು. ಇದರಂತೆಯೇ ಮತ್ತೆ ಎಷ್ಟೋ ವಿದ್ವಾಂಸರೂ ವಿದುಷಿಯರೂ ಸ್ವಾಮಿಗಳ ದರ್ಶ ನಕ್ಕೆ ಬರುತ್ತಿದ್ದರು; ಹಿಂದುಧರ್ಮ, ಹಿಂದುದೇಶ, ಹಿಂದುಜನಾಂಗ ಗಳ ಬಗೆಗೆ ಪಲವಾರು ವಿಷಯಗಳನ್ನು ಕೇಳಿಕೊಳ್ಳುತ್ತಿದ್ದರು, ಆ ಬಗೆಗೆ ನಿಜವಾದ ಜ್ಞಾನ ಮಾಡಿಕೊಳ್ಳುತ್ತಿದರು.

ಈ ಅವಿಶ್ರಾಂತ ಪರಿಶ್ರಮದಿಂದ ಸ್ವಾಮಿಜಿಯವರ ಪ್ರಕೃತಿ ಅಸ್ವಸ್ಥವಾಯಿತು. ಇನ್ನು ಕೆಲಕಾಲ ನೀವು ಸಂಪೂರ್ಣ ವಿಶ್ರಾಂತಿ ಯನ್ನು ತೆಗೆದುಕೊಳ್ಳಬೇಕು, ಎಂದು ಸಲಹೆ ಕೊಟ್ಟರು. ಅಷ್ಟ ರಲ್ಲಿ ಹಿಂದುಸ್ಥಾನಕ್ಕೆ ಮರಳಿ ಬರಬೇಕೆಂದು ಭಾರತೀಯ ಶಿಷ್ಯ ರಿಂದ ಸ್ವಾಮಿಗಳಿಗೆ ಪತ್ರಗಳೂ ಹೋದುವು. ಆಗ ಅವರು ಹಿಂದುಸ್ಥಾನದಿಂದ ಗುರುಬಂಧು ಶಿವಾನಂದರನ್ನು ಇಂಗ್ಲಂಡಕ್ಕೆ ಕರೆಸಿಕೊಂಡರು; ಗುಡ್‌ವಿನ್‌ರೊಡನೆ ಅವರನ್ನು ಅಮೇರಿಕೆಗೆ ಕಳಿಸಿದರು. ಅವರಿಬ್ಬರೂ ರಾಮಕೃಷ್ಣ ಮಠ-ವರ್ಗಗಳ ವ್ಯವಸ್ಥೆ ನೋಡಿಕೊಳ್ಳಹತ್ತಿದರು. ಇದರಂತೆ ಅಭೇದಾನಂದ, ಅಭಯಾನಂದಾರಿಗೆ ಇಂಗ್ಲಂಡದಲ್ಲಿ ಮಠ-ವರ್ಗಗಳ ವ್ಯವಸ್ಥೆಯನ್ನು ಸ್ವಾಮಿಗಳು ಒಪ್ಪಿಸಿದರು.

ಆ ಮೇಲೆ ಸ್ವಾಮಿಜಿ ವಿದೇಶದಲ್ಲಿಯೇ ಕೆಲವು ಕಾಲ ವಿಶ್ರಾಂತಿಯನ್ನು ತಕ್ಕೊಂಡರು. ಗುರುಸಂದೇಶದ ಕೆಲಸ ಪೂರ ಯಿಸಿದಂತಾಗಿತ್ತು. ಹಿಂದು ಧರ್ಮಧ್ವಜಗಳಿಂದ ಮಠ-ವರ್ಗಗಳು ವಿದೇಶಗಳಲ್ಲಿ ಒಳ್ಳೆ ಉತ್ತಮ ಸ್ಥಿತಿಯಲ್ಲಿ ನಾಗಿದ್ದುವು. ಈ ಹೊತ್ತಿಗೆ ಭಾರತದ ಶಿಷ್ಯರಿಂದ ಮತ್ತೆ ಒತ್ತಾಯದ ಪತ್ರಗಳು ಸ್ವಾಮಿಗಳಿಗೆ ಮುಟ್ಟಿದುವು. ಅವರು ಭಾರತಕ್ಕೆ ಹೊರಟರು. ಆ ಕಾಲಕ್ಕೆ ಇಂಗ್ಲಂಡ, ಅಮೇರಿಕೆಯ ನಾಗರಿಕರು ಅವರನ್ನು ವಿಧವಿಧವಾಗಿ ಸತ್ಕರಿಸಿ ಬೀಳ್ಕೊಟ್ಟರು. ಸ್ವಾಮಿಗಳ ಸಂಗಡ ಅಲ್ಲಿಯ ಶಿಷ್ಯರೂ ಭಾರತಕ್ಕೆ ಹೊರಟರು.

## ೧೦. ಮರಳಿ ಮಾತೃ ಭೂಮಿಗೆ

ಈ ಪ್ರಯಾಣದಲ್ಲಿ ಸ್ವಾಮಿಗಳು ಮೊದಲು ಕೋಲಂಬೋ ಬಂದರಕ್ಕೆ ಬಂದಿಳಿದರು. ಸ್ವಾಮಿಜಿಯ ಪ್ರಶಂಸೆ ಈ ಮೊದಲು ಜಗತ್ಪ್ರಸಿದ್ಧವಾಗಿತ್ತು. ಸಿಲೋನಿಗಳೂ ಸ್ವಾಮಿಜಿಯವರ ಬರವನ್ನು ಹಾರಯಿಸುತ್ತಿದ್ದರು. ಅಲ್ಲಿ ಅವರಿಗೆ ಸಂಭ್ರಮದ ಸ್ವಾಗತವಾಯಿತು; ಮಾನಪತ್ರ ಸಮರ್ಪಣವಾಯಿತು-ಅಲ್ಲಿಂದ ಮುಂದೆ ಮದ್ರಾಸ, ಮುಂಬೈ, ಲಾಹೋರ, ಕಲಕತ್ತಾಗಳಿಗೆ ಸ್ವಾಮಿಗಳು ಪ್ರಯಾಣ ಬೆಳಿಸಿದರು. ಎಲ್ಲಿ ಹೋದಲ್ಲಿ ಅವರಿಗೆ ಪ್ರಚಂಡ ಸ್ವಾಗತವಾಯಿತು; ಮಾನಪತ್ರಗಳ ಸುರಿಮಳೆಯಾಯಿತು.

ಈಗ ಹಿಂದುಸ್ತಾನದಲ್ಲಿಯೂ ಇವರು ಮಾಡಬೇಕಾದ ಕೆಲಸ ಬೇಕಾದಷ್ಟಿತ್ತು. ಮೊದಲು ಶಿಷ್ಯರು ಕೆಲವು ಪತ್ರಿಕೆಗಳನ್ನು ನಡ

ಸುತಿದ್ದರು. ಅವುಗಳಲ್ಲಿ ರಾಮಕೃಷ್ಣ ಪರಮಹಂಸರ ಉಪದೇಶಾಮೃತವನ್ನು ಪ್ರಕಟಿಸುತ್ತಿದ್ದರು. ಆ ಪತ್ರಿಕೆಗಳು ಸುವ್ಯವಸ್ಥಿತವಾಗಿ ನಡೆಯುವಂತೆ ಸ್ವಾಮಿಗಳು ವ್ಯವಸ್ಥೆ ಮಾಡಿದರು; ಮತ್ತು ಅವುಗಳಿಗೆ ತಮ್ಮ ಸಾಹಿತ್ಯ ಸಂಗ್ರಹವನ್ನೂ ಒದಗಿಸಿದರು.

ಆ ಮೇಲೆ ಹಿಮಾಲಯದ ನೆರೆಯಲ್ಲಿಯೇ ಎರಡು ಆಶ್ರಮಗಳನ್ನು ಸ್ಥಾಪಿಸಿದರು. ಒಂದು ಕಲಕತ್ತೆಯ ನೆರೆಯ ಬೇಲೂರಲ್ಲಿ; ಮತ್ತೊಂದು ಅದರ ನೆರೆಯಲ್ಲಿಯೇ ಮಾಯಾವತಿಯಲ್ಲಿ. ಮಾಯಾವತಿಯ ಅದ್ವೈತಾಶ್ರಮದ ವ್ಯವಸ್ಥೆಯನ್ನು ಕ್ಯಾ. ಸೇವ್ಹಿಯರ್ ಅವರಿಗೆ ಒಪ್ಪಿಸಿದರು. ಬೇಲೂರು ರಾಮಕೃಷ್ಣ ಮಿಶನದ ವ್ಯವಸ್ಥೆಯನ್ನು ಬೇಲೂರ ಪಂಚರ ಕಡೆಗೆ ಕೊಟ್ಟರು. ನಿಃಸ್ವಾರ್ಥ ಸೇವೆಯ ಬ್ರಹ್ಮಚಾರಿಗಳನ್ನು ಸಿದ್ಧಪಡಿಸುವುದೇ ಈ ಆಶ್ರಮದ ಹೆಗ್ಗುರಿ.

ಈಗ ಸ್ವಾಮಿಗಳು ಕೆಲಕಾಲ ವಿಶ್ರಾಂತಿಯನ್ನು ಪಡೆಯುವ ವಿಚಾರದಲ್ಲಿದ್ದರು. ಅಷ್ಟರಲ್ಲಿ ಆ ಭಾಗದೊಳಗೆ ಭಯಂಕರ ಬರಗಾಲ ತಲೆದೋರಿತು. ಹೊಟ್ಟೆಗಿಲ್ಲದೆ ಹೆಣಗಳು ಬೀದಿಯಲ್ಲಿಯೇ ಬೀಳಹತ್ತಿದುವು. ಆಗ ಸ್ವಾಮಿಜಿ 'ಸಹಾಯ ಸಮಿತಿ'ಯನ್ನು ಮಾಡಿದರು. ಅದರ ಸದಸ್ಯರೂ ತಾವೂ ಒಟ್ಟಾಗಿ ಸಿರಿವಂತರಿಂದ ಹಣಕಾಳುಕಡಿಗಳನ್ನು ಕೂಡಿಸಿದರು; ಬಡಬಗ್ಗರನ್ನು ಬದುಕಿಸಿದರು.

ಇದು ಮುಗಿಯುವ ಹೊತ್ತಿಗೆ ಪ್ಲೇಗು ಬೇನೆ ಆರಂಭವಾಯಿತು. ಆಗ ಅದರ ಉಗ್ರತೆ ಬಹಳವಾಗಿತ್ತು. ಪ್ರತಿಬಂಧಕ ಉಪಾಯಗಳೂ ಸಾಕಷ್ಟಿರಲಿಲ್ಲ. ಸ್ವಾಮಿಯವರು ಮತ್ತೆ 'ಸೇವಾ ಸಮಿತಿ'ಯನ್ನು ನಿರ್ಮಿಸಿದರು. ಅದರ ಸದಸ್ಯರೂ ತಾವೂ ಕೂಡಿಯೇ ರೋಗಿಗಳ ಉಪಚಾರ ಮಾಡತೊಡಗಿದರು. ಅನೇಕರ ಪ್ರಾಣಗಳನ್ನು ಉಳಿಸಿದರು.

ಈ ತರುವಾಯ ಲೋಕಶಿಕ್ಷಣಕ್ಕಾಗಿ ಅಲ್ಲಲ್ಲಿ ಪಾಠಶಾಲೆಗಳನ್ನು ಸ್ಥಾಪಿಸಿದರು, ಅವುಗಳಿಗೆ ಧನನಿಧಿಯನ್ನು ಕೂಡಿಸಿಕೊಟ್ಟರು. ಕಲಕತ್ತೆಯಲ್ಲಿ ಬ್ರಹ್ಮಚರ್ಯಾಶ್ರಮವನ್ನು ಆರಂಭಿಸಿದರು. ಅಲ್ಲಿ ತರುಣ ಜನರಿಗೆ ಬ್ರಹ್ಮಚರ್ಯದ ಮಹತ್ತ್ವ, ಅವಶ್ಯಕತೆಗಳನ್ನು ಹೇಳಿದರು; ಅದೊಂದು ಸಂಸ್ಥೆನಾಗುವಂತೆ ಮಾಡಿದರು. ಏಕೆಂದರೆ, ಭಾರತದ ಉದ್ಧಾರಕ್ಕೆ ಬ್ರಹ್ಮಚಾರಿಗಳು ತಂಡೋಪತಂಡವಾಗಿ ಬೈಲಿಗೆ ಬರಬೇಕು, ಅವರೇ ಲೋಕಶಿಕ್ಷಕರಾಗಬೇಕು. ಎಂದು ಸ್ವಾಮಿಗಳ ಮತವಾಗಿತ್ತು.

ಹೀಗೆಯೇ ಸ್ವಾಮಿಜಿ ಹಲವಾರು ಸಂಘ ಸಂಸ್ಥೆಗಳನ್ನು ಸ್ಥಾಪಿಸಿದರು, ಅವು ಸುವ್ಯವಸ್ಥಿತವಾಗಿ ನಡೆಯುವಂತೆ ಹಣವನ್ನು ಕೂಡಿಸಿ ಕೊಟ್ಟರು. ಈ ತಿರುಗಾಟದಲ್ಲಿ ಅವರ ಪ್ರಕೃತಿ ಮತ್ತಿಷ್ಟು ಕೆಟ್ಟಿತು. ಆಗ ಡಾಕ್ಟರರು ಹವೆಯನ್ನು ಬದಲಿಸಲು ಅವರಿಗೆ ಹೇಳಿದರು. ಅದಕ್ಕಾಗಿ ಸ್ವಾಮಿಗಳವರು ಮತ್ತೊಮ್ಮೆ ಅಮೇರಿಕೆಗೆ ಹೊರಟರು.

ಅಮೇರಿಕನರು ಅವರನ್ನು ಪ್ರಚಂಡ ಸ್ವಾಗತಮಾಡಿ ಕರೆದುಕೊಂಡರು. ಅಲ್ಲಿ ಮತ್ತೆ ಅನೇಕ ಉಪನ್ಯಾಸಗಳಾದುವು; ಅಲ್ಲದೆ 'ವೇದಾಂತ ಸೊಸಾಯಿಟಿ', 'ಶಾಂತಾಶ್ರಮ'ಗಳ ಸ್ಥಾಪನೆಯಾಯಿತು. ಗುರುಗಳ ಸಂದೇಶವೇನೋ ಪೂರೈಸಿತು. ಆದರೆ ಸ್ವಾಮಿಗಳ ಪ್ರಕೃತಿ ಸುಧಾರಣೆಯ ಉದ್ದೇಶ ಹಿಡಿತಕ್ಕೆ ಬರಲಿಲ್ಲ. ಅವರು ವಿಶ್ರಾಂತಿಯನ್ನು ಪಡೆದರಲ್ಲವೇ ಪ್ರಕೃತಿ ಸುಧಾರಿಸಬೇಕು. ದೇಶ ದೇವಧರ್ಮಗಳಿಗಾಗಿ ದೇಹವನ್ನು ಮೀಸಲಿಟ್ಟವರು ಮರಣಕ್ಕೆಂದಾದರೂ ಹೆದರುವುದುಂಟೇ? ಆದರೆ ಈಗ ಪ್ರಕೃತಿ ಪರತಂತ್ರವಾಗುತ್ತ ನಡೆಯಿತು. ಅದರಿಂದ ಸ್ವಾಮಿಜಿ ಮರಳಿ ಭಾರತಕ್ಕೆ ಬಂದರು. ಇಲ್ಲಿಯಾದರೂ ವಿಶ್ರಾಂತಿಯನ್ನು ಪಡೆದರೇ?

ಅಷ್ಟರಲ್ಲಿ ಪ್ಯಾರಿಸಿನಲ್ಲಿ ಸರ್ವಧರ್ಮ ಪರಿಷತ್ತು ಕೂಡುವುದಿತ್ತು. ಅಲ್ಲಿಂದ ಸ್ವಾಮಿಗಳಿಗೆ ಆಮಂತ್ರಣ ಬಂದಿತು. ಇನ್ನೆಲ್ಲಿಯ ವಿಶ್ರಾಂತಿ? ಸ್ವಾಮಿಗಳು ಹಡಗವನ್ನು ಹತ್ತಿಯೇ ಬಿಟ್ಟರು. ಫ್ರಾನ್ಸದಲ್ಲಿ ಹಿಂದು ಧರ್ಮಧ್ವಜವನ್ನು ನಿಲ್ಲಿಸಿಯೇ ತೀರಿದರು.

ಅವರು ಮತ್ತೆ ಭಾರತಕ್ಕೆ ಬಂದರು. ಕೂಡಲೆ ಜಪಾನದಿಂದ ಧರ್ಮ ಪರಿಷತ್ತಿಗೆ ಬರಬೇಕೆಂದು ಆಮಂತ್ರಣ ಬಂದಿತು. ಸ್ವಾಮಿಜಿ ಪ್ರಕೃತಿಯ ಪರವೆಯಿಲ್ಲದೆ ಒಪ್ಪಿಗೆಯನ್ನು ಕಳಿಸಿದರು; ಆದರೆ ಶಿಷ್ಯರು ಅವರನ್ನು ಹೋಗಗೊಡಲಿಲ್ಲ.

ಡಾಕ್ಟರರ ಉಪಚಾರ ಒಂದೇಸವನೆ ನಡೆಯಿತು. ಆದರೂ ಸ್ವಾಮಿಗಳ ದೇಹಸ್ಥಿತಿ ದಿನದಿನಕ್ಕೆ ಕೆಡುತ್ತ ನಡೆಯಿತು. ಅದರಿಂದ ಶಿಷ್ಯರೆಲ್ಲ ಕೂಡಿ ಅವರನ್ನು ಮಾಯಾವತಿಯ ಅದ್ವೈತಾಶ್ರಮಕ್ಕೆ ವಿಶ್ರಾಂತಿಗೆ ಕಳಿಸಿದರು. ಅಲ್ಲಿಯೂ ಗುಣವಾಗಲಿಲ್ಲ. ಬಳಿಕ ಬೇಡೂರ ಮಠಕ್ಕೆ ದಯಮಾಡಿಸಿದರು ಸ್ವಾಮಿಜಿ.

ಬೇಡೂರಲ್ಲಿ ಪಾಠಶಾಲೆಯಿತ್ತು. ದುಡಿದ ಜೀವ ಸುಮ್ಮನೆ ಕುಳಿತೀತೇ? ಸ್ವಾಮಿಜಿ ಅಲ್ಲಿ ವಿದ್ಯಾರ್ಥಿಗಳಿಗೆ ವ್ಯಾಕರಣ ಹೇಳುತ್ತಿದ್ದರು. ದಿನಾಲು ಸಂಧ್ಯಾಸಮಯದಲ್ಲಿ ಎಲ್ಲರನ್ನೂ ಆಡ್ಡಾಡಲು ಕರೆದೊಯ್ಯುತ್ತಿದ್ದರು. ಆ ಮೇಲೆ ತುಸು ಹೊತ್ತು ಸಮಾಧಿಯನ್ನು ಹಚ್ಚುತ್ತಿದ್ದರು.

೧೯೦೨ನೆಯ ಜುಲೈ ೪ನೆಯ ದಿನಾಂಕ. ಸ್ವಾಮಿಗಳು ಪಾಠಗಳನ್ನು ಮುಗಿಸಿದರು, ತಿರುಗಾಡಿ ಬಂದರು, ವಿದ್ಯಾರ್ಥಿಗಳಿಗೆ ಪ್ರಾರ್ಥನೆ ಮಾಡಹೇಳಿ ತಾವು ಸಮಾಧಿಸ್ಥರಾದರು! ತಾಸಾಯಿತು, ಎರಡು ತಾಸಾದುವು; ಪ್ರಾರ್ಥನೆ ನಡೆದೇ ಇತ್ತು. ಸ್ವಾಮಿಗಳಿಗೆ ಹತ್ತಿದ ಸಮಾಧಿ ಇಳಿಯಲೇ ಇಲ್ಲ. ಎಲ್ಲರೂ ಗಾಬರಿಯಿಂದ ನೋಡಿದರು. ಸ್ವಾಮಿಗಳು ಪರಮಾತ್ಮನಲ್ಲಿ ಐಕ್ಯವಾಗಿದ್ದರು!!

ಸುದ್ದಿ ತಡವಿಲ್ಲದೆ ಎಲ್ಲೆಡೆ ಹಬ್ಬಿತು. ಭಕ್ತರು ಎ
ಲ್ಲಿಂದಲೋ ತಂಡತಂಡವಾಗಿ ಬಂದರು. ಪದ್ಧತಿಯಂತೆ ಎ
ಸಂಸ್ಕಾರಗಳೂ ನಡೆದುವು. ದೇಶ ವಿದೇಶಗಳಲ್ಲಿ ದುಃಖಸೂಚಕ ಸಭೆಗಳಾದುವು. ಅಂದು ಅವರ ದೇಹ ಕಣ್ಮರೆಯಾಯಿತು. ಆದರೆ ಇಂದಿಗೂ ಸ್ವಾಮಿ ವಿವೇಕಾನಂದರು, ಎಂದ ಕೂಡಲೆ ಸಂನ್ಯಾಸಿಯ ಸುಂದರ ಮೂರ್ತಿಯೊಂದು ನಮ್ಮ ಕಣ್ಣೆದಿರು ನಿಲ್ಲುವುದಿಲ್ಲವೇ? ಇದಕ್ಕೆ ಕಾರಣವೇನು?

"ದುಡಿ, ದುಡಿ, ದುಡಿ! ದುಡಿಮೆಯೇ ಪರಮೇಶ್ವರನ ಸತ್ಯವಾದ ಪೂಜೆ!"

"ನಾರಾಯಣ ನಿಮ್ಮ ಬಾಗಿಲಮುಂದೆ ಭಿಕ್ಷುಕನ ವೇಷದಿಂದ ಬಿಕ್ಕೆ ಬೇಡುತ್ತಿದ್ದಾನೆ; ಹಸಿವೆಯಿಂದ ಕಸವಿಸಿಗೊಳ್ಳುತ್ತಿದ್ದಾನೆ. ಅವನ ಹೊಟ್ಟೆಗೆ ಹಾಕುವುದನ್ನು ಬಿಟ್ಟು ನಿಮ್ಮ ಮಡದಿ ಮಕ್ಕಳ ಮೋಹದಲ್ಲಿ ಮುಳುಗಿದಿರಾದರೆ....ಥೂ! ನಿಮ್ಮ ಪಶು ಜೀವನಕ್ಕೆ ಬೆಂಕೀ ಹಚ್ಚಲಿ."

"ಹತ್ತಿರ ಹಣವಿಲ್ಲದ ಮಾತ್ರಕ್ಕೆ ಬಡವನೆಂದು ಬಳಲಬೇಡ. ಹಣವೊಂದು ಸಂಪತ್ತೇ ಅಲ್ಲ. ನಿನ್ನ ನಿಜವಾದ ನಡೆನುಡಿಗಳೇ ನಿಜವಾದ ಸಂಪತ್ತು. ಈ ಸಿರಿವಂತಿಕೆಯನ್ನು ಸರ್ವಾತ್ಮನಾ ಸಂಪಾದಿಸು!"

"ಬಡವರ ಹೊಟ್ಟೆಗೆ ಹಿಡಿ ಅನ್ನವನ್ನು ಕೊಡಲಾರದ, ವಿಧವೆಯರ ಕಣ್ಣೀರನ್ನು ಕಳೆಯಲಾರದ ದೇವರಾಗಲಿ ಧರ್ಮವಾಗಲಿ ಎಲ್ಲಿಯೂ ಇಲ್ಲ. ಇದ್ದರೂ ಅವು ನನಗೆ ಬೇಡ"

"ರಾಷ್ಟ್ರದ ಜನಸಾಮಾನ್ಯರನ್ನು ದುರ್ಲಕ್ಷಿಸುವುದು ಮಹಾ ಪಾಪ. ಈ ಪಾಪದ ಫಲವಾಗಿಯೇ ಆ ನರಕದ ದುಃಖವನು.

ಅನುಭವಿಸುತ್ತಿದ್ದೇವೆ. ಜನಸಾಮಾನ್ಯರಿಗೆ ಶಿಕ್ಷಣ, ಅನ್ನ, ವಸ್ತ್ರ, ಆರೋಗ್ಯಗಳು ಸರಿಯಾಗಿ ಸಿಕ್ಕುವಂತೆ ವ್ಯವಸ್ಥೆಯಾಗುವ ವರೆಗೆ ನಮ್ಮ ಯಾವ ರಾಜಕಾರಣವೂ ಯಶಸ್ವಿಯಾಗಲಾರದು......... ಇದಕ್ಕಾಗಿಯೇ ನಾನು ಕಲಕತ್ತಾ ಮತ್ತು ಮದ್ರಾಸಗಳಲ್ಲಿ ಎರಡು ಕೇಂದ್ರಗಳನ್ನು ತೆರೆಯಬೇಕೆನ್ನುವೆ. ಅಲ್ಲಿ ಸಮಾಜ ಶಿಕ್ಷಣಕ್ಕೆ ತಕ್ಕ ನಿಃಸ್ವಾರ್ಥಸೇವಕರನ್ನು ಸಿದ್ಧಮಾಡುವುದೇ ನನ್ನ ಉದ್ದೇಶ!"

ಶ್ರೀ ಸ್ವಾಮಿ ವಿವೇಕಾನಂದರವರ ಉಪದೇಶದ ಮಹಾಸಾಗರ ದಲ್ಲಿ ನಾಲ್ಕೈದು ಹನಿಗಳಿವು. ಅಗುಳಿನಿಂದ ಅನ್ನದ ಪರೀಕ್ಷೆ ಮಾಡುವಂತೆ, ಇವಿಷ್ಟರಿಂದಲೇ ಸ್ವಾಮಿಜಿ ಅವರ ಪ್ರಗತಿಶೀಲ ವಿಚಾರಗಳನ್ನೂ ಹೃದಯದ ಪರಿಶುದ್ಧತೆಯನ್ನೂ ಕಲ್ಪಿಸಿಕೊಳ್ಳ ಬಹುದು.

ಸ್ವಾಮಿಜಿಯವರ ಚರಿತ್ರೆಗಳೂ, ಉಪನ್ಯಾಸಗಳೂ, ಪತ್ರ ಗಳೂ ರಾಶಿರಾಶಿಯಾಗಿ ಎಲ್ಲ ಭಾಷೆಗಳಲ್ಲಿಯೂ ಸಿಕ್ಕುತ್ತಿವೆ. ನಮ್ಮ ಕನ್ನಡದಲ್ಲಿ ಕೂಡ ಅವರ ಸಂಬಂಧದ ಕೆಲವು ಹೊತ್ತಗೆಗಳು ಸಿಕ್ಕು ತ್ತಿವೆ. ಸಮಯ ಸಿಕ್ಕಾಗ ಒಮ್ಮೆಯಾದರೂ ಅವುಗಳನ್ನು ಓದ ಬೇಕು. ಎಂದರೆ, ಅವರ ಪ್ರಗತಿಪರ ಧರ್ಮದಂಡ ನಮ್ಮ ಊನ ಬಾಳಿಗೆ ಆನುಗೋಲಾಗುವುದು; ಅವರ ಉಪದೇಶ ನಮ್ಮ ಸತ್ತ ದೇಹದಲ್ಲಿ ಮತ್ತೆ ಹೊಸ ಉಸಿರನ್ನು ಹರಿಸುವುದು.



## ಚಿಕ್ಕ ಮಕ್ಕಳ ಸಲುವಾಗಿ 卐 卐 卐

# ದೊಡ್ಡ ದೊಡ್ಡ ಅಕ್ಷರಗಳಿಂದ ಮುದ್ರಿಸಿದ

# — ಕತೆ ಪುಸ್ತಕಗಳು

| | | | |
|---|---|---|---|
| ೧. | ಮಹಾವೀರ ಮಾರುತಿರಾಯ | : | ೦—೬—೦ |
| ೨. | ಬಲಶಾಲಿ ಭೀಮಸೇನ | : | ೦—೬—೦ |
| ೩. | ರಾಜಾ ರಾಮಮೋಹನರಾಯ | : | ೦—೬—೦ |
| ೪. | ಸ್ವಾಮಿ ವಿವೇಕಾನಂದರು | : | ೦—೬—೦ |
| ೫. | ರಾಷ್ಟ್ರಮಾತಾ ಕಸ್ತೂರಬಾ | : | ೦—೬—೦ |
| ೬. | ಪಂಡಿತ ಈಶ್ವರಚಂದ್ರ ವಿದ್ಯಾಸಾಗರ | | ೦—೪—೦ |
| ೭. | ಮಹಾತ್ಮಾ ಗಾಂಧಿ | : | ೦—೪—೦ |
| ೮. | ಜವಾಹಿರಲಾಲ ನೆಹರು | : | ೦—೪—೦ |
| ೯. | ರವೀಂದ್ರನಾಥ ಠಾಕೂರ | : | ೦—೩—೦ |
| ೧೦. | ಮೌಲಾನಾ ಅಬುಲ್ ಕಲಮ್ ಆಝಾದ | | ೦—೨—೦ |
| ೧೧. | ಭಗವಾನ್ ಬುದ್ಧದೇವ | : | ೦—೪—೦ |
| ೧೨. | ಶ್ರೀ ರಾಮಕೃಷ್ಣ ಪರಮಹಂಸರ ದಿವ್ಯಜೀವನ | | ೦—೧೨—೦ |
| ೧೩. | ಕವಿ ಮತ್ತು ಕವಿತೆ | : | ೦—೨—೬ |
| ೧೪. | ಒಂದನೆಯ ದರ್ಜೆಯ ಕತೆ | : | ೦—೨—೬ |
| ೧೫. | ಎರಡನೆಯ ದರ್ಜೆಯ ಕತೆ | : | ೦—೩—೦ |
| ೧೬. | ಮೂರನೆಯ ದರ್ಜೆಯ ಕತೆ | : | ೦—೩—೬ |

ಮುದ್ರಕರು: ಎಚ್. ಆರ್. ಅಗಳವಾಡಿ ಬಿ. ಎ., ಬಿ. ಕಾಮ್.
ಧಾರವಾಡ.